# ಸಂನ್ಯಾಸಿ

ಮತ್ತು

# ಇತರ ಕಥೆಗಳು

(ಸತ್ಯಪುಸ್ತಕ ಮುದ್ರಣ)

ಕುವೆಂಪು





ಬೆಲೆ: ರೂ. ೧-೦-೦

ಉದಯರವಿ
ವಿ. ವಿ. ಪುರಂ
ಮೈಸೂರು.

# ವಿವರ

# ಸಂನ್ಯಾಸಿ

ಸದ್ದಿಲ್ಲದ ಶಾಂತಿ ಎಲ್ಲೆಲ್ಲಿಯೂ ಹಬ್ಬಿತ್ತು. ಹುಣ್ಣಿಮೆಯ ತಣ್ಣದಿರನ ತುಂಬು ಬಿಂಬವು ಬಿತ್ತರದ ಬಾಂದಳದಲ್ಲಿ ತೊಳಗಿ ತೇಲುತ್ತ ಮೋಡಗಳ ತೆರೆಮರೆಯಲ್ಲಿ ಮರೆಯಾಗಿ ಮರಳಿ ಮೈದೋರಿ, ತನ್ನ ತುದಿಯರಿಯದ ಚಂಚಲ ಲೀಲೆಯಲ್ಲಿ ತೊಡಗಿತ್ತು. ಮನೋಹರವಾದ ತಿಂಗಳ ಬೆಳಕು ಗಂಗೆ ಯಮುನೆಯರ ಸಂಗಮದೊಡನೆ ತಾನೂ ಸಂಗಮಿಸಿ ತೆರೆ ತೆರೆಗೂ ಹಬ್ಬಿ ತನ್ನ ಸೊಬಗಿನ ವಯ್ಯಾರಕ್ಕೆ ತಾನೇ ಹಿಗ್ಗಿ, ಹೆಮ್ಮೆಯಿಂದ ನಲಿಯುತ್ತಿತ್ತು. ಪ್ರಯಾಗ ಕ್ಷೇತ್ರದ ವನಗಳು ಕೌಮುದಿಯ ಕಡಲಿನಲ್ಲಿ ಮುಳುಗಿ ಮಲಗಿದ್ದುವು. ತಂಬೆಲರು ಮೆಲ್ಲಮೆಲ್ಲನೆ ತಳಿರು ಹೂಗಳನ್ನು ಮುದ್ದಿಸಿ ಅಲ್ಲಲ್ಲಿ ಸುಳಿಸುಳಿದು ತನ್ನಿನಿಯಳನ್ನು ಅರಸುವ ವಿರಹಿಯಂತೆ ತೊಳಲುತ್ತಿತ್ತು.

ಗಂಗೆ ಯಮುನೆಯರ ಸಂಗಮಸ್ಥಳದ ಬಳಿ, ಮರಳಿನಲ್ಲಿ ಮಲಗಿದ್ದ ಒಂದು ದೊಡ್ಡ ಬಂಡೆಯ ಮೇಲೆ ಬ್ರಹ್ಮಚಾರಿ ಚೈತನ್ಯನು ಪದ್ಮಾಸನ ಹಾಕಿ ಕುಳಿತುಕೊಂಡು, ತಿಳಿಯಾಳದಾಗಸದ ವೈಭವ ವೈಚಿತ್ರ್ಯ ಸೌಂದರ್ಯಗಳನ್ನು ದಿಟ್ಟಿಸುತ್ತಿದ್ದನು. ಆಗ ತಾನೆ ಧ್ಯಾನವನ್ನು ಪೂರೈಸಿದ್ದ ಆತನ ಮನಸ್ಸು ಹೃದಯ ಎರಡೂ ಹೊರಗಡೆ ಹರಡಿದ್ದ ಶಾಂತಿ ಸೌಂದರ್ಯಗಳನ್ನು ಇಮ್ಮಡಿಯಾಗಿ ಪಡೆದಿದ್ದುವು. ಗಗನದಲ್ಲಿ ಗಣನೆಯಿಲ್ಲದೆ ಮಿಣುಕುತ್ತಿದ್ದ ಚುಕ್ಕಿಗಳನ್ನೂ, ಮೋಹದ ಮುದ್ದೆಯಂತೆ ರಂಜಿಸುತ್ತಿದ್ದ ತಿಂಗಳನ್ನೂ, ಚಂದ್ರಿಕೆಯಲ್ಲಿ ಕೆನೆಯ ತುಂಬುಗಳಂತೆ ತೇಲುತ್ತಿದ್ದ ಮುಗಿಲಿನ ಗುಂಪನ್ನೂ, ಬಳಸಿದ್ದ ಬನಗಳ ಮಾಲೆಯನ್ನೂ, ಗಂಗೆ ಯಮುನೆಯರಿಬ್ಬರೂ ಒಬ್ಬರನ್ನೊಬ್ಬರು ಆಲಿಂಗಿಸಿ ಪ್ರವಹಿಸುತ್ತಿದ್ದ ಗಂಭೀರ ಗಮನವನ್ನೂ ನೋಡಿ ನೋಡಿ, ಜಗದೊಡೆಯನ ದೇಹದ ಪೆಂಪು ಸೂಚಿಸುವ ಆತನ ಆತ್ಮದ ಉತ್ತಮ ವೈಭವವನ್ನು ನೆನೆದು ನೆನೆದು ಮೈಮರೆಯುತ್ತಿದ್ದನು.

ಕುಳಿತಿದ್ದ ಹಾಗೆಯೇ ಆತನು ಅಂತರ್ಮುಖಿಯಾಗಿ, ಜೀವಮಾನದಲ್ಲಿ

ತಾನು ಅಡರಿ ಬಂದ ಮೆಟ್ಟಲುಗಳನ್ನು ಹಿಂತಿರುಗಿ ನೋಡತೊಡಗಿದನು. ಅನೇಕಾನೇಕ ಚಿತ್ರಗಳು ಚಿತ್ತಭಿತ್ತಿಯಲ್ಲಿ ಹೊಳೆವಳಿದುವು. ಕೆಲವು ಸ್ಪಷ್ಟವಾಗಿ ತೋರಿದುವು ; ಮತ್ತೆ ಕೆಲವು ಮಬ್ಬು ಮಬ್ಬಾಗಿ ಕಂಡುಬಂದುವು; ಇನ್ನು ಕೆಲವು ಎಲ್ಲಿಯೋ ಎಂದೋ ನೋಡಿದ ಬಹು ದೂರದ ಕನಸುಗಳಂತೆ ಮುಂದೆ ಸುಳಿದುವು. ಎರಡು ವರುಷಗಳಾಚೆ ತಾನು ಮನೆಯನ್ನು ಬಿಟ್ಟು, ಗುರುವನ್ನು ಹುಡುಕಿಕೊಂಡು ಊರಿಂದೂರಿಗೆ ಅಲೆದು, ಪ್ರಯಾಗ ಕ್ಷೇತ್ರಕ್ಕೆ ಬಂದು, ಸ್ವಾಮಿ ಪ್ರೇಮಾನಂದರ ಶಿಷ್ಯನಾಗಿ ಸಂನ್ಯಾಸ ಸ್ವೀಕಾರ ಮಾಡಿದ್ದರವರೆಗೂ ಸ್ಮರಿಸಿಕೊಂಡನು.

ಮುಂದೆ ಇನ್ನಾವ ಚಿತ್ರಗಳು ಮನಸ್ಸಿನಲ್ಲಿ ಸುಳಿಯುತ್ತಿದ್ದುವೋ ಏನೋ, ಅಷ್ಟರಲ್ಲಿ ಯಾರೋ ಹಿಂದಿನಿಂದ ಕೇಳಿದರು “ ಏನು ಚೈತನ್ಯ, ಬಹಳ ಹೊತ್ತಿನಿಂದ ಕುಳಿತುಬಿಟ್ಟಿದ್ದೀಯೆ ?”

ಚೈತನ್ಯನು ದನಿಯಿಂದ ಗುರುತು ಹಿಡಿದು ಮೆಲ್ಲನೆ ಹಿಂತಿರುಗಿ ನೋಡಿ “ ಬಾ ಮುಕುಂದಾ !” ಎಂದು ಮುಗುಳುನಗೆ ನಕ್ಕನು.

“ ಧ್ಯಾನಮಾಡುತ್ತಿದ್ದೆಯೋ ಏನೋ ?”

“ಸೃಷ್ಟಿ ಸೌಂದರ್ಯವನ್ನು ನೋಡುತ್ತಿದ್ದೆ. ಎಷ್ಟು ಶಾಂತವಾಗಿದೆ ಈ ರಾತ್ರಿ ?”

“ ಹೌದು ಅತ್ಯಂತ ರಮಣೀಯವಾಗಿದೆ. ಆದರೆ ಸಂನ್ಯಾಸಿಯಲ್ಲಿ ಕವಿ ಇರುವನೆಂದು ನನಗೆ ಭಾವನೆ ಇರಲಿಲ್ಲ !”

“ ಇದೇನು ಹೀಗೆನ್ನುವೆ ? ಸಂನ್ಯಾಸಿ ಎಂದರೇನು ಕಗ್ಗಲ್ಲೆ ?”

“ ಯೋಗವೆಂದರೆ ಚಿತ್ತವೃತ್ತಿ ನಿರೋಧ ಎಂದು ನೀನು ಹೇಳಿದೆ.”

“ ಚಿತ್ತವೃತ್ತಿ ನಿರೋಧವೆಂದರೆ ಭಾವದ ಅಭಾವ ಎಂದು ತಿಳಿದೆಯಾ? ಯೋಗವೆಂದರೆ ಆತ್ಮಹತ್ಯವಲ್ಲ, ಮುಕುಂದ! ಮೊನ್ನೆ ಗುರುಗಳು ‘ ಸಮತ್ವಂ ಯೋಗ ಉಚ್ಯತೇ ’ ಎಂಬುದರ ಮೇಲೆ ಮಾಡಿದ ವ್ಯಾಖ್ಯಾನವನ್ನು ಕೇಳಲಿಲ್ಲವೇ ನೀನು ? ನಿಂತುಕೊಂಡಿರುವೆ ಏಕೆ ? ಬಾ, ಕುಳಿತುಕೋ.”

ಮುಕುಂದನು ಬಂದು ಹತ್ತಿರ ಕುಳಿತುಕೊಂಡು ಚೈತನ್ಯನನ್ನೇ ಎವೆಯಿಕ್ಕದೆ ನೋಡತೊಡಗಿದನು. ಸಂನ್ಯಾಸಿಯ ಮುಖವು ಯಾವುದೋ

ಒಂದು ಅಲೋಕಜ್ಯೋತಿಯಿಂದ ಕಂಗೊಳಿಸುತ್ತಿತ್ತು. ಕಣ್ಣುಗಳು ಅನಂತವನ್ನು ಭೇದಿಸುವಂತೆ ಮಿಂಚುತ್ತಿದ್ದುವು. ಗುಲಾಬಿ ಬಣ್ಣದ ಕಾವಿಯನ್ನುಟ್ಟಿದ್ದ ಆತನ ಗಂಭೀರಾಕಾರವು ಇಹಲೋಕದ್ದಲ್ಲದ ಸೌಂದರ್ಯದಿಂದ ದಿವ್ಯಪುರುಷನ ನೆನಪನ್ನು ತರುತ್ತಿತ್ತು. ಮುಕುಂದನ ಎದೆ ಹಾರತೊಡಗಿ ಕಣ್ಣುಗಳಿಂದ ಒಂದೆರಡು ಬಿಂದುಗಳು ಸೂಸಿದುವು. ಆದರೆ ಚೈತನ್ಯನು ಕಾಣದಂತೆ ಮುಖವನ್ನು ತಿರುಗಿಸಿಕೊಂಡು ಅವುಗಳನ್ನು ವಸ್ತ್ರದ ಸೆರಗಿನಿಂದ ಒರಸಿಬಿಟ್ಟನು.

ಸ್ವಾಮಿ ಪ್ರೇಮಾನಂದರ ಆಶ್ರಮಕ್ಕೆ ಎಷ್ಟೋಜನ ಭಕ್ತರು ಶಾಂತಿ ಲಾಭಕ್ಕಾಗಿ ಬಂದು ಹೋಗುವ ವಾಡಿಕೆ. ಮುಕುಂದನೂ ಅವರಲ್ಲಿ ಒಬ್ಬನು. ಚೈತನ್ಯನು ತಾನು ಸಂನ್ಯಾಸ ಸ್ವೀಕಾರಮಾಡಿದ ಒಂದೂವರೆ ವರ್ಷದ ಮೇಲೆ ಮುಕುಂದನನ್ನು ಭಕ್ತರ ಗುಂಪಿನಲ್ಲಿ ಕಂಡನು. ಅಂದಿನಿಂದ ಅವರಿಬ್ಬರ ಗೆಳೆತನವೂ ಬೆಳೆಯಿತು. ಆತನು ಎಷ್ಟೋಸಾರಿ ಚೈತನ್ಯನೊಡನೆ ತತ್ತ್ವಶಾಸ್ತ್ರದ ಗಹನ ವಿಚಾರಗಳನ್ನು ಕುರಿತು ಚರ್ಚಿಸಿ ತಿಳಿದುಕೊಂಡಿದ್ದನು. ಆತನೊಡನೆ ಅನೇಕಸಾರಿ ಹೊಳೆಯ ಬಳಿ ಸಂಚಾರ ಮಾಡಿ ವಿನೋದವಾಗಿ ಕಾಲಕಳೆದಿದ್ದನು. ಆದ್ದರಿಂದಲೇ ಅವರಿಬ್ಬರಿಗೂ ತುಂಬಾ ಸಲಿಗೆ. ಚೈತನ್ಯನು ಅಸಾಧಾರಣ ವ್ಯಕ್ತಿ ಎಂದು ಮುಕುಂದನಿಗೆ ಗೊತ್ತು. ಆದರಿಂದ ಅವನಿಗೆ ಆತನಲ್ಲಿ ಬಹಳ ಗೌರವ. ಚೈತನ್ಯನಿಗೂ ಮುಕುಂದನನ್ನು ಕಂಡಂದಿನಿಂದ ಆತನಲ್ಲಿ ಏನೋ ಅನಿರ್ವಚನೀಯವಾದ ಪ್ರೇಮ. ಆತನ ಸರಳತೆ ಹೃದಯವನ್ನು ಸೂರೆಗೊಂಡು ಬಿಟ್ಟಿತ್ತು. ಪ್ರೇಮಾನಂದರಿಗೂ ಮುಕುಂದನಲ್ಲಿ ಬಹಳ ವಿಶ್ವಾಸ; ಅವನು ಬಹಳ ಕಾಲವನ್ನೆಲ್ಲ ಆಶ್ರಮದಲ್ಲಿಯೇ ಕಳೆಯುತ್ತಿದ್ದನು.

ಚೈತನ್ಯನು ಮುಕುಂದನ ಊರು ತಂದೆತಾಯಿಗಳ ವಿಚಾರ ಕೇಳಿದಾಗಲೆಲ್ಲ "ಇಂದು ಬೇಡ; ಎಂದಾದರೂ ಒಂದು ದಿವಸ ತಿಳಿಸುತ್ತೇನೆ" ಎನ್ನುವನು. ಆಮೇಲೆ ಚೈತನ್ಯನು ಆ ಪ್ರಸ್ತಾಪವನ್ನೇ ಎತ್ತುತ್ತಿರಲಿಲ್ಲ. ಏಕೆಂದರೆ, ಆ ಪ್ರಶ್ನೆಯನ್ನು ಕೇಳಿದಾಗಲೆಲ್ಲ ಮುಕುಂದನು ಮುಗುವಿನಂ ಅತ್ತುಬಿಡುತ್ತಿದ್ದನು.

ಪ್ರತಿದಿನವೂ ಸಾಯಂಕಾಲ ಗುರುದೇವನ ಉಪದೇಶವಾದ ಮೇಲೆ

ಭಕ್ತಮಂಡಲಿಯೆಲ್ಲ ಸಾಧುವರ್ಯನ ಅಡಿದಾವರೆಗಳಿಗೆ ಅಡ್ಡಬಿದ್ದು ಆಶ್ರಮದಿಂದ ಹೊರಟುಹೋಗುವರು. ಮುಕುಂದನು ಮಾತ್ರ ಚೈತನ್ಯನೊಡನೆ ಹೊಳೆಯ ತಡಿಯ ಬನಗಳಲ್ಲಿ ಬಹಳ ಹೊತ್ತು ಅಡ್ಡಾಡಿ ಕತ್ತಲಾದಮೇಲೆ ಮನೆಗೆ ಹೋಗುವನು. ಈ ದಿನ ಸಾಯಂಕಾಲ ಚೈತನ್ಯನು ತಿರುಗಾಡಲು ಹೊರಡುವಾಗ ಮುಕುಂದನನ್ನು ಕರೆದನು. ಆದರೆ ಅವನು ತಾನು ಹಿಂದಿನಿಂದ ಬರುವುದಾಗಿಯೂ, ಗುರುದೇವನೊಡನೆ ಕೆಲವು ರಹಸ್ಯ ಸಂಗತಿಗಳನ್ನು ತಿಳಿದುಕೊಳ್ಳಬೇಕಾಗಿದೆ ಎಂದೂ ಹೇಳಿದನು. ಚೈತನ್ಯನು ಒಬ್ಬನೇ ಹೊಳೆಯ ಬಳಿ ಅಲ್ಲಲ್ಲಿ ಅಡ್ಡಾಡಿ, ಕಡೆಗೆ ಬಂಡೆಯಮೇಲೆ ಬಂದು ಕುಳಿತಿದ್ದನು.

ಆ ಪ್ರಶಾಂತವಾದ ರಾತ್ರಿಯಲ್ಲಿ ಬೆಳ್ದಿಂಗಳನ್ನು ಹೊದೆದುಕೊಂಡು ಸುತ್ತಲೂ ಹಬ್ಬಿದ್ದ ವಿಶಾಲವಾದ ಬಿಳಿಯ ಮರಳುರಾಶಿಯ ನಡುವೆ, ಚೈತನ್ಯನೂ ಮುಕುಂದನೂ ಸ್ವಪ್ನವ್ಯಕ್ತಿಗಳಂತೆ ಬಹಳಹೊತ್ತು ಮೌನವಾಗಿ ಕುಳಿತರು. ಬಳಿಯಲ್ಲಿ ಮಂಜುಳ ರವದಿಂದ ನದಿ ನಿರಂತರವಾಗಿ ಪ್ರವಹಿಸುತ್ತಿತ್ತು; ಮನೋಹರವಾದ ಸಾಂದ್ರಚಂದ್ರಿಕೆಯಲ್ಲಿ ಗಿರಿವನಪ್ರದೇಶಗಳೆಲ್ಲ ಜೊನ್ನಿನ ಕಡಲಿನಲ್ಲಿ ಮುಳುಗಿ ಮೈಮರೆತಿದ್ದುವು; ಗಗನಾಂಗಣದಲ್ಲಿ ತಾರೆಗಳು ಮಿಣುಕುತ್ತಿದ್ದುವು; ಚಂದ್ರನು ಅವಾಙ್ಮನಾತೀತವಾದ ತನ್ನ ಅನಂತ ಪ್ರಯಾಣದಲ್ಲಿ ಮಗ್ನನಾಗಿದ್ದನು.

"ಇಂದೇನು ಇಷ್ಟು ಮೌನವಾಗಿರುವೆ, ಮುಕುಂದಾ?"

"ಇಂದು ನನ್ನ ಹೃದಯದ ಅಂತರಾಳದಲ್ಲಿ ಇದುವರೆಗೂ ಮಲಗಿ ನಿದ್ರಿಸಿದ್ದ ಯಾವುದೋ ಒಂದು ಅಪ್ರಮೇಯವಾದ ಯಾತನೆ ಪ್ರಬುದ್ಧವಾಗಿದೆ!"

"ಏನು! ಇಂಥಾ ಶಾಂತ ಸೌಂದರ್ಯದಲ್ಲಿದ್ದರೂ ಯಾತನೆಯೆ?"

"ಹೌದು, ಚೈತನ್ಯ, ನನ್ನ ಮನಸ್ಸಿನಲ್ಲಿ ಶಾಂತಿಯಿಲ್ಲ. ತತ್ತ್ವದಿಂದ ಶಾಂತಿ ಲಭಿಸುತ್ತದೆ ಎಂದು ತಿಳಿದಿದ್ದೆ. ಆದರೆ ಅದು ಹುಸಿಯಾಯ್ತು. ಶಾಂತಿ ನನ್ನಿಂದ ದಿನದಿನವೂ ದೂರವಾಗುತ್ತಿದೆ."

"ಹಾಗೆನ್ನಬೇಡ. ಪರಮಾತ್ಮನಲ್ಲಿ ಭಕ್ತಿಯನ್ನಿಡು. ಶಾಂತಿ ದೊರಕುತ್ತದೆ."

" ಭಕ್ತಿಯನ್ನಿಟ್ಟಿರುವೆ. ಆದರೂ ದೊರಕಲಿಲ್ಲ! ನನಗೇನೋ ಕೆಲವು ಸಂದೇಹಗಳಿವೆ. ನೀನು ಪರಿಹರಿಸಬಲ್ಲೆಯಾ ? "

" ಆಗಲಿ, ಗುರುದೇವನ ಕೃಪೆಯಿಂದ ಪ್ರಯತ್ನಮಾಡುತ್ತೇನೆ."

" ಒಂದಲ್ಲದೆ ಎರಡಿಲ್ಲ ಎಂದು ಅನೇಕಸಾರಿ ನೀನು ನನಗೆ ಹೇಳಿದೆಯಲ್ಲಾ ಅವರ ಗೂಢಾರ್ಥವೇನು ? ವಿವಿಧ ವಸ್ತುಗಳಿಂದ ತುಂಬಿದ ಈ ಜಗತ್ತು ಒಂದೇ ಎಂದು ಹೇಳುವುದು ಹೇಗೆ ? ಹಾಗೆ ಹೇಳಿದರೆ ನಮ್ಮ ಬುಡಕ್ಕೆ ನಾವು ಕೊಡಲಿ ಹಾಕಿದಂತೆ ಆಗುವುದಿಲ್ಲವೆ ? "

" ಮುಕುಂದ, ವಸ್ತುಗಳು ಬೇರೆಬೇರೆಯಾಗಿ ಕಂಡರೂ ಅಂತರ್ಯಾಮಿಯಾಗಿರುವ ಅಂತರಾತ್ಮವು ಒಂದೇ. ಗುಪ್ತಗಾಮಿಯಾದ ಚೈತನ್ಯವಾಹಿನಿ ಎಲ್ಲೆಲ್ಲಿಯೂ ತುಂಬಿ ಮರೆಯಾಗಿ ಹರಿಯುತ್ತದೆ. ಇದನ್ನೇ 'ಏಕಮೇವಾದ್ವಿತೀಯಂ' ಎನ್ನುವುದು.

" ಹಾಗಾದರೆ ಸೃಷ್ಟಿಯ ಉದ್ದೇಶವೇನು ? "

" ಭಗವಂತನ ಲೀಲೆಗೆ ಉದ್ದೇಶವಿಲ್ಲ. ಇದ್ದರೂ ಅಸಂವೇದ್ಯ."

" ಲೀಲೆ ಎಂದ ಮೇಲೆ ನಾವು ಲೀಲೆಗೆ ವಿರೋಧವಾಗಿ ನಡೆಯುವುದು ತಪ್ಪಲ್ಲವೆ ? "

" ಹೌದು."

" ಹಾಗಾದರೆ 'ಏಕಮೇವಾದ್ವಿತೀಯಂ' ಎನ್ನುವುದು ಲೀಲೆಯಿಂದ ಹೊರಗೆ ನಿಂತು ನೋಡುವವನಿಗೇ ಹೊರತು ನಮಗಲ್ಲ "

" ನಿಶ್ಚಯ."

" ಸಂನ್ಯಾಸ ಎನ್ನುವುದು ಲೀಲೆಗೆ ವಿರೋಧವಾದುದಲ್ಲವೆ ? "

" ಇಲ್ಲ; ಅದೊಂದು ಕಠಿನತರವಾದ ಲೀಲೆ ? "

" ಹಾಗಾದರೆ ಅದೊಂದು ಬರಿಯ ಸಾಹಸವೆಂದು ಅರ್ಥವೆ ? ".

ಚೈತನ್ಯನು ಮಾತನಾಡಲಿಲ್ಲ. ವಿಚಾರಮಗ್ನನಾದನು. ಸ್ವಲ್ಪ ಹೊತ್ತಿನಮೇಲೆ " ಮುಕುಂದ, ಸೃಷ್ಟಿಯ ಸಮಸ್ಯೆ ಬರಿಯ ಮಾತಿಗೆ ಸಿಲುಕತಕ್ಕದ್ದಲ್ಲ. ಅನುಭವವೇದ್ಯವಾದದ್ದು. ಹೀಗೆಂದು ಗುರುದೇವನ ಉಪದೇಶ " ಎಂದನು.

" ಚೈತನ್ಯ, ಈ ಹುಣ್ಣಿಮೆಯ ರಾತ್ರಿಯ ಸುರಸೌಂದರ್ಯವು ನಿಜ

ವಾಗಿಯೂ ನಿನ್ನ ಎದೆಯನ್ನು ಮುಟ್ಟುವುದೆ?"

"ಹೌದು, ಸೌಂದರ್ಯವೂ ಪರಮಾತ್ಮನ ಒಂದು ಅಂಶವಲ್ಲವೆ?"

"ಸಂನ್ಯಾಸಿಯ ಹೃದಯವು ಸೌಂದರ್ಯಕ್ಕೆ ಸೆರೆಯಾಗಬಹುದೆ?"

"ಆನಂದಕ್ಕೆ ಸೆರೆಯಾಗಬಹುದಾದರೆ ಸೌಂದರ್ಯಕ್ಕೆ ಸೆರೆಯಾಗಬಾರದೇಕೆ? ಆದರೆ ಸಂನ್ಯಾಸಿಯ ಭಾವಕ್ಕೆ ಸೌಂದರ್ಯವು ಪರಬ್ರಹ್ಮನ ಅಂಶವೇ ಹೊರತು, ಅಹಂಕಾರಪೋಷಕವಾದ ಭೋಗವಲ್ಲ! ಆತನು ಸೊಬಗಿಗೆ ಶರಣಾಗತನಾಗನು; ಅದರಲ್ಲಿ ತಲ್ಲೀನನಾಗುವನು!"

"ಹಾಗಾದರೆ ನೀನು ನಿನ್ನ ಮೇಲೆಯೇ ಕೂತಿಲ್ಲವಷ್ಟೆ?"

ಚೈತನ್ಯನು ಕೆಳಗೆ ನೋಡಿ "ಇಲ್ಲ, ನಾನು ಅಚೇತನವಾದ ಶಿಲೆಯಲ್ಲ" ಎಂದು ಮುಗುಳುನಗೆ ನಕ್ಕನು.

"ನೀನು ಅನೇಕಸಾರಿ ನನ್ನ ಊರು ತಂದೆತಾಯಿಗಳ ವಿಚಾರ ಕೇಳಿದ್ದೆ. ನಾನು ಇದುವರೆಗೂ ಹೇಳಲಿಲ್ಲ."

"ಏನೊ, ನಿನಗೆ ಮನಸ್ಸು ಬರಲಿಲ್ಲ."

"ನಿನ್ನ ಊರು ತಂದೆತಾಯಿಗಳ ವಿಚಾರವಾಗಿ ನನ್ನೊಡನೆ ಹೇಳಬಾರದೇಕೆ?"

"ಸಂನ್ಯಾಸಿ ಪೂರ್ವಾಶ್ರಮದ ವಿಚಾರವನ್ನು ಯಾರೊಡನೆಯೂ ಹೇಳಬಾರದೆಂದು ಕಟ್ಟಪ್ಪಣೆ."

"ಆಗಲಿ; ಇಂದು ನಾನು ನಿನಗೆಲ್ಲ ಹೇಳಿಬಿಡಲೆ?"

"ನನಗೇನೊ ಕುತೂಹಲವಿದೆ."

"ಆದರೆ ನನಗೊಂದು ಭಯ."

"ಯಾಕೆ?"

"ನೀನೆಲ್ಲಿ ನನ್ನನ್ನು ತಿರಸ್ಕರಿಸುವಿಯೋ ಎಂದು."

"ಸಂನ್ಯಾಸಿ ಯಾರನ್ನೂ ತಿರಸ್ಕರಿಸನು. ಅದರಲ್ಲಿಯೂ ಪ್ರಿಯ ಸ್ನೇಹಿತನನ್ನು ತಿರಸ್ಕರಿಸುವುದು ಹೇಗೆ?"

"ಸಂನ್ಯಾಸಿ ಯಾರನ್ನೂ ತಿರಸ್ಕರಿಸನೇ?"

"ಇಲ್ಲ."

"ನಿಜವಾಗಿಯೂ?"

"ನಿಜವಾಗಿಯೂ ಇಲ್ಲ."

"ಕಾಮಿನಿಯನ್ನು!"

ಚೈತನ್ಯನು ಸ್ವಲ್ಪಹೊತ್ತು ಸುಮ್ಮನಿದ್ದು "ನಾನು ಆ ಅವಸ್ಥೆಯನ್ನು ದಾಟಿದ್ದೇನೆ?" ಎಂದನು.

"ನಾನಿಂದು ಗುರುದೇವನ ಬಳಿಗೆ ಹೋಗಿದ್ದೆ: ಇಲ್ಲಿಗೆ ಬರುವುದಕ್ಕಿಂತ ಮುಂಚೆ."

"ಏತಕ್ಕಾಗಿ?"

"ಏನೋ ಒಂದು ಭಿಕ್ಷೆ ಬೇಡಲು."

"ಸಂನ್ಯಾಸಿಯು ಹತ್ತಿರ ಭಿಕ್ಷೆ ಬೇಡುವುದೆ?"

"ಹೌದು, ಬೇಡಿದೆ."

"ನೀಡಿದರೇನು?"

"ನೀಡಿದರು: ಅವರು ಮಹಾತ್ಮರು!"

"ಯಾವ ಭಿಕ್ಷೆ? ನಿನಗೂ ಸಂನ್ಯಾಸವನ್ನು ಕೊಡಬೇಕೆಂದೆ?"

"ಆದರೆ ನೀನೂ ನೀಡಿದ ಹೊರತು ಅವರ ಭಿಕ್ಷೆ ಸಂಪೂರ್ಣವಾಗಲಾರದು! ಸಾರ್ಥಕವಾಗಲಾರದು!"

"ಅವರು ನೀಡಿದಮೇಲೆ ನಾನು ನೀಡಿದಂತೆಯೇ?"

"ನೀನೂ ನೀಡಿದೆಯಾ?"

"ಹೌದು! ಯಾವ ಭಿಕ್ಷೆ?"

೨

ಆ ದಿನ ಸಾಯಂಕಾಲ ಉಪದೇಶ ಮುಗಿದನಂತರ ಭಕ್ತಮಂಡಲಿಯೆಲ್ಲ ಗುರುವಿಗೆ ನಮಸ್ಕಾರಮಾಡಿ ಆಶೀರ್ವಾದ ಪಡೆದು ತೆರಳಿದ ಮೇಲೆ ಆಶ್ರಮದಲ್ಲಿ ಗುರುಗಳು ಒಬ್ಬರೇ ಕುಳಿತಿದ್ದರು. ಮುಕುಂದನು ಬಂದು ಅವರಿಗೆ ಸಾಷ್ಟಾಂಗ ನಮಸ್ಕಾರ ಮಾಡಿದನು.

ಗುರುದೇವನು ಆಶೀರ್ವದಿಸಿ ಕೇಳಿದರು: "ಕ್ಷೇಮವೇ, ಮುಕುಂದಾ?"

ಮುಕುಂದನೆಂದನು: "ಹೌದು, ಗುರುದೇವ, ತಮ್ಮ ಕೃಪೆಯಿಂದ."

"ನಿನ್ನ ಧ್ಯಾನ ಜಪ ಸಾಂಗವಾಗಿ ನಡೆಯುತ್ತಿವೆಯೇ?"

"ಇಲ್ಲ, ಗುರುದೇವ; ಹೃದಯದಲ್ಲಿ ಏನೋ ಅಶಾಂತಿ!"

"ಕಾರಣ?"

"ಅದಕ್ಕಾಗಿ ನನ್ನ ತಪ್ಪನ್ನು ಮನ್ನಿಸಬೇಕೆಂದು ಕೇಳಿಕೊಳ್ಳಲು ಬಂದಿದ್ದೇನೆ."

"ತಪ್ಪಾದರೂ ಏನು?"

"ನಾನು ಪಾಪಿ."

"ಏನು ಪಾಪ ನಿನ್ನದು?"

"ನಾನು ಕಪಟವೇಷಧಾರಿ."

"ನೀನೊಬ್ಬನೇ ಅಲ್ಲ; ಸಮಸ್ತ ಜಗತ್ತೂ ಕಪಟವೇಷಧಾರಿ! ಭಗವಂತನನ್ನೇ ಕಪಟನಾಟಕಸೂತ್ರಧಾರಿ ಎನ್ನುವುದಿಲ್ಲವೇ?"

"ಹಾಗಲ್ಲ, ಗುರುದೇವ; ನನ್ನ ಕಪಟವೇಷದ ರೀತಿಯೇ ಬೇರೆ."

"ಅದೇನು ಹೇಳಬಾರದೆ?"

ಮುಕುಂದನು ಬಿಕ್ಕಿಬಿಕ್ಕಿ ಅಳತೊಡಗಿದನು. ಗುರುವು ಅವನನ್ನು ನಾನಾ ಮಾತುಗಳಿಂದ ಸಂತೈಸಲೆಳಸಿದನು.

ಆದರೆ ಮುಕುಂದನು "ಗುರುದೇವ, ಬರಿಯ ಮಾತುಗಳಿಂದ ನನ್ನ ದುಃಖ ಶಮನವಾಗುವುದಿಲ್ಲ" ಎಂದನು.

"ಹಾಗಾದರೆ ನಿನಗೇನು ಬೇಕು?"

"ಒಂದು ಭಿಕ್ಷೆ ಬೇಡಲು ಬಂದಿದ್ದೇನೆ."

"ಯಾವ ಭಿಕ್ಷೆ?"

"ಎಲ್ಲಿ ಭಂಗವಾಗುವುದೋ ಎಂದು ಹೆದರಿಕೆ! ನಾನು ಹತಾಶನಾದರೆ ನನಗೆ ಮರಣವೇ ಗತಿ."

"ಹೆದರಬೇಡ! ಧೈರ್ಯವಾಗಿಯೇ ಹೇಳು."

"ಗುರುದೇವ, ಆರುತಿಂಗಳ ಹಿಂದೆ ನಾನು ಇಲ್ಲಿಗೆ ಬಂದೆ. ನಿಮ್ಮ ಚರಣಸನ್ನಿಧಿಯಲ್ಲಿ ಶಾಂತಿಯನ್ನು ಪಡೆಯಲೆಳಸಿದೆ. ಎಷ್ಟೋ ಪ್ರಯತ್ನ ಮಾಡಿದೆ. ಆದರೆ ಸಾಧ್ಯವಾಗಲಿಲ್ಲ. ನನ್ನ ಹೃದಯವು ಬಲಶಾಲಿಯಲ್ಲ. ಬಲು ಹೇಡಿ. ಇಂದು ತಮ್ಮೆದುರು ನಿಜವನ್ನು ಹೇಳಿ, ನನ್ನ ಜೀವಮಾ

ನವ ಕಡೆಯ ತೀರ್ಪನ್ನು ಪಡೆಯಬೇಕೆಂದು ಬಂದಿದ್ದೇನೆ. ನೀವು ಅನುಗ್ರಹಿಸಿದರೆ ನಾನು ಉಳಿಯುತ್ತೇನೆ; ಇಲ್ಲದಿದ್ದರೆ ಅಳಿಯುತ್ತೇನೆ."

ಗುರುದೇವನು ಪ್ರಸನ್ನದೃಷ್ಟಿಯಿಂದ ಮುಕುಂದನನ್ನೇ ನೋಡುತ್ತಾ ಇದ್ದನು. ಮುಕುಂದನು ಇದ್ದಕಿದ್ದಹಾಗೆ ತನ್ನ ರುಮಾಲನ್ನು ಕಳಚಿ ಗುರುವಿಗೆ ಸಾಷ್ಟಾಂಗ ನಮಸ್ಕಾರ ಮಾಡಿದನು. ನೀಳವಾದ ಕೇಶಪಾಶ, ಬೈತಲೆ! ಮುಕುಂದನು ಸ್ತ್ರೀಯಂತೆ ತೋರಿದನು.

ಗುರುದೇವನು ಚಕಿತನಾಗದೆ ಶಾಂತಚಿತ್ತದಿಂದ "ಇದೇನು ಮುಕುಂದ?"

"ನಾನು ಮುಕುಂದನಲ್ಲ? ರಮೇಶನ ಇಂದಿರೆ."

"ಚೈತನ್ಯ ನಿನಗೇನಾಗಬೇಕು?"

"ಚೈತನ್ಯನಲ್ಲ; ರಮೇಶ ನನಗೆ ಪತಿ! ಗುರುದೇವ, ಆತನು ನನ್ನನ್ನು ಮದುವೆಯಾಗಿ ಸ್ವಲ್ಪ ದಿನಸಗಳಲ್ಲಿಯೇ ಮಾಯವಾದನು. ಅತ್ತೆಮಾವಂದಿರು ಶೋಕದಿಂದ ತೀರಿಹೋದರು. ಇದು ರಮೇಶನ ತಪ್ಪೆಂದು ನಾನು ಎಣಿಸಲಾರೆ. ಆತನು ವಿವಾಹಕ್ಕೆ ಒಪ್ಪಿರಲಿಲ್ಲ. ವಿರಕ್ತಿ ಮಾರ್ಗವೇ ಆತನ ಧ್ಯೇಯವಾಗಿತ್ತು. ಆದರೆ ಆತನ ತಂದೆತಾಯಿಗಳು ಆತನು ಎಲ್ಲಿ ಸಂನ್ಯಾಸಿಯಾಗಿಬಿಡುವನೋ ಎಂಬ ಹೆದರಿಕೆಯಿಂದ ಆತನಿಗೆ ಬಲಾತ್ಕಾರವಾಗಿ ಮದುವೆಮಾಡಿದರು. ಆತನು ಹೇಳದೆ ಕೇಳದೆ ಬಂದುಬಿಟ್ಟನು. ನನ್ನ ಬಾಳು ಮರುಭೂಮಿಯಾಯಿತು. ಎಲ್ಲರೂ ನನ್ನನ್ನು ಕಡೆಗಣ್ಣಿನಿಂದ ನೋಡತೊಡಗಿದರು. ನಾನು ರಮೇಶನ ನೆಲೆಯನ್ನು ತಿಳಿಯಬೇಕೆಂದು ಈ ವೇಷವನ್ನು ಧರಿಸಿ ಅಲೆದು ಅಲೆದು ಕಡೆಗೆ ತಮ್ಮ ಸನ್ನಿಧಿಯಲ್ಲಿ ನನ್ನ ಇಷ್ಟದೇವತೆಯನ್ನು ಕಂಡೆ. ಇಷ್ಟು ದಿನವೂ ಆತನೊಡನೆ ಇದ್ದು ಆತನ ಸ್ನೇಹವನ್ನು ಸಂಪಾದಿಸಿದ್ದೇನೆ. ಆದರೆ ಆತನು ಈಗ ಗುರುದೇವನ ಚೈತನ್ಯ. ಮುಕುಂದನ ಗೆಳೆಯ ಇಂದಿರೆಯ ಇನಿಯನಾಗಿಲ್ಲ. ಅನಾಥಳಾದ ನಾನು, ನಿರ್ಭಾಗ್ಯೆಯಾದ ನಾನು, ಪತಿಭಿಕ್ಷೆಯನ್ನು ಬೇಡುತ್ತೇನೆ. ತಾವು ಸರ್ವಜ್ಞರು; ಮಹಾತ್ಮರು; ನನಗೆ ಜೀವದಾನ ಮಾಡಬೇಕು."

"ಮಗಳೆ, ಚೈತನ್ಯನಿಗೆ ಈ ಸಂಗತಿ ಗೊತ್ತೆ?"

"ಗೊತ್ತಿಲ್ಲ ಗುರುದೇವ."

"ಸಂನ್ಯಾಸಿಯಾದವನು ಪುನಃ ಸಂಸಾರಿಯಾಗುವುದು ಮಹಾ ಪಾಪ! ಚೈತನ್ಯನಿಗೆ ಅನಿಷ್ಟ."

"ಕೈಹಿಡಿದವಳನ್ನು ದುಃಖಸಾಗರಕ್ಕೆ ಕಲ್ಲುಕಟ್ಟಿ ಎಸೆಯುವುದಕ್ಕಿಂತ ಮಹಾಪಾಪವೆ? ಅದಕ್ಕಿಂತ ಹೆಚ್ಚಿನ ಅನಿಷ್ಟವುಂಟಾಗುವುದೆ?"

"ಅಲ್ಲದೆ ಚೈತನ್ಯನು ತೀವ್ರ ವೈರಾಗಿ."

"ರಮೇಶನ ಹೃದಯವು ಇನ್ನೂ ಕಗ್ಗಲ್ಲಾಗಿಲ್ಲ. ಗುರುದೇವ, ನಾನು ಬಲ್ಲೆ. ತಮ್ಮ ಅನುಜ್ಞೆಯಾದರೆ ಸಾಕು. ತಮ್ಮ ಆಶೀರ್ವಾದ ಬಲವೊಂದು ಇದ್ದರೆ ಎಂಥಾ ಪಾಪವಾಗಲಿ, ಅನಿಷ್ಟವಾಗಲಿ ಎಲ್ಲ ಭಸ್ಮವಾಗುವುದು. ಭಕ್ತಿಯಿಂದ ಸೆರಗೊಡ್ಡಿ ಬೇಡುವೆನು."

"ಮಗಳೆ, ನನ್ನ ಅನುಜ್ಞೆಯಿದೆ. ನನ್ನ ಆಶೀರ್ವಾದವಿದೆ. ನಾನು ಕಗ್ಗಲ್ಲು ಎಂದು ಎಣಿಸಬೇಡ. ಹೋಗು, ನಿನ್ನ ಸಾಹಸದಿಂದ ನೀನು ಗೆಲ್ಲು. ನಿನ್ನ ಜೀವನಗಾನದ ಮಧುರ ಸ್ವಪ್ನವನ್ನು ನಾನೇಕೆ ಒಡೆದು ಹಾಕಲಿ? ಅದು ತನಗೆ ತಾನೇ ಒಡೆದಮೇಲೆಯೆ ನೀವಿಬ್ಬರೂ ನನ್ನೆಡೆಗೆ ಬನ್ನಿ. ಸ್ವಪ್ನವಾದರೂ ಮಾಧುರ್ಯವು ಎಂದಿಗೂ ಮಾಧುರ್ಯವೆ. ಎಂದು ನೀವು ಸ್ವಪ್ನದಿಂದ ಎಚ್ಚತ್ತಾಗ ಮಾಧುರ್ಯವು ಬಿಸಿಲ್ಗುದುರೆಯಾಗಿ ಕಹಿಯಾಗುವುದೋ ಅಂದು ಇಲ್ಲಿಗೆ ಬನ್ನಿ. ಆಗ ನಿಮ್ಮ ಹೃದಯಮಂದಿರಗಳಲ್ಲಿ ಶಾಂತಿಯನ್ನು ನೆಲೆಗೊಳಿಸುವುದೂ ಸುಲಭ. ನಿನ್ನ ಸಾಹಸಕ್ಕೆ ನನ್ನ ಸಮ್ಮತವಿದೆ; ಹೋಗು ಮಗಳೆ."

ಇಂದಿರೆ ರುಮಾಲನ್ನು ಸುತ್ತಿಕೊಂಡು ಗುರುದೇವನ ಪಾದಧೂಳಿಯನ್ನು ತನ್ನ ತಿಲಕವಲ್ಲಿಟ್ಟು ಹೊರಕ್ಕೆ ಹೋದಳು. ಗುರುದೇವನು ಜಗತ್ತಿನ ಮಾಯೆಯನ್ನು ನೆನೆದು ಮಂದಸ್ಮಿತನಾದನು.



"ಆದರೆ ನೀನೂ ನೀಡಿದ ಹೊರತು ಅವರ ಭಿಕ್ಷೆ ಸಂಪೂರ್ಣವಾಗಲಾರದು! ಸಾರ್ಥಕವಾಗಲಾರದು!"

"ಅವರು ನೀಡಿದಮೇಲೆ ನಾನು ನೀಡಿದಂತೆಯೇ!"

"ನೀನೂ ನೀಡಿದೆಯಾ?"

"ಹೌದು, ಯಾವ ಭಿಕ್ಷೆ?"

"ಪತಿಭಿಕ್ಷೆ! ರಮೇಶನ ಭಿಕ್ಷೆ! ನಿನ್ನ ಭಿಕ್ಷೆ!"

ಹೀಗೆಂದು ಹೇಳಿದ ಮುಕುಂದನು ಇಂದಿರೆಯಾಗಿ ಚೈತನ್ಯನ ಎದುರಿನಲ್ಲಿ ನಿಂತಳು. ಚೈತನ್ಯನು ಬೆಚ್ಚಿಬಿದ್ದು ಎದ್ದು ನಿಂತು, ತನ್ನೆದುರಿನಲ್ಲಿ ಬಿತ್ತರದ ಮರಳುರಾಶಿಗೆ ಎದುರಾಗಿ ಮನೋಹರವಾದ ಕೌಮುದಿಯ ಕಾಂತಿಯಲ್ಲಿ ನಿಂತಿದ್ದ ವ್ಯಕ್ತಿಯನ್ನು ಎವೆಯಿಕ್ಕದೆ ನೋಡಿದನು. ನೋಡುತ್ತ ನೋಡುತ್ತ ಮುಕುಂದನು ಮನಸ್ಸಿನ ದಿಗಂತದಲ್ಲಿ ದೂರದೂರ ಸರಿದು ಅನಂತದಲ್ಲಿ ಐಕ್ಯವಾದನು. ಆದರೆ ಮುಕುಂದನಿಗೆ ಬದಲಾಗಿ ಮೊದಮೊದಲು ದರ್ಶನ ಚಿತ್ರದಂತೆ ಮಬ್ಬುಮಬ್ಬಾಗಿ, ಬರಬರುತ್ತಾ ತಿಳಿಯಾಗಿ, ಕಟ್ಟಕಡೆಗೆ ಸ್ಪಷ್ಟವಾಗಿ ಇಂದಿರೆ ಸಮೀಪಕ್ಕೆ ಬಂದು ನಿಂತಳು. ಆ ಚಂದ್ರಕಾಂತಿಯಲ್ಲಿ, ಆ ರಾತ್ರಿಯ ಮಹಾಶಾಂತಿಯಲ್ಲಿ, ಗಂಗೆ ಯಮುನೆಯರ ಆ ದಿವ್ಯ ಸಂಗಮಸ್ಥಳದಲ್ಲಿ, ಆ ವಿಶಾಲವಾದ ಶ್ವೇತ ಸೈಕತ ರಾಶಿಯಲ್ಲಿ ಅನಂತವು ಶಾಂತವನ್ನೂ ಅವ್ಯಕ್ತವು ವ್ಯಕ್ತವನ್ನೂ ದಿಟ್ಟಿಸುವ ಹಾಗೆ ಚೈತನ್ಯನು ಇಂದಿರೆಯನ್ನು ಎವೆಯಿಕ್ಕದೆ ನೋಡಿದನು. ಕಾಲವು ಅವರನ್ನೇ ನೋಡುತ್ತಾ ತನ್ನ ಗಮನವನ್ನು ಮರೆತುಬಿಟ್ಟಿತು. ನಕ್ಷತ್ರಗಳು ಅವರನ್ನೇ ನೋಡಿದುವು. ಹರಿಯುವ ನದಿಗಳೆರಡೂ ನಿಂತು ನೋಡಿದುವು. ಚಂದ್ರನೂ ನಿಂತನು. ಸಮಸ್ತ ವಿಶ್ವವೂ ಮುಂದೇನಾಗುವುದೋ ಎಂದು ಕಾತರಗೊಂಡು ನಿಂತುಬಿಟ್ಟಿತು.

ಸ್ವಲ್ಪ ಹೊತ್ತಾದ ಮೇಲೆ ಇಂದಿರೆ ಕರೆದಳು: "ರಮೇಶ"

"ಮುಕುಂದ, ನಾನು ರಮೇಶನಲ್ಲ; ಚೈತನ್ಯ!"

"ರಮೇಶ, ನಾನೂ ಮುಕುಂದನಲ್ಲ. ಇಂದಿರೆ! ಭಿಕ್ಷೆ ಬೇಡಲು ಬಂದಿದ್ದೇನೆ. ಭಿಕ್ಷೆ ನೀಡಲು ಮಾತುಕೊಟ್ಟಿದ್ದೀಯೆ!"

"ಭಿಕ್ಷೆ ನೀಡಲು ಎದ್ದು ನಿಂತಿದ್ದೇನೆ! ಮುಕುಂದನು ಭಿಕ್ಷೆ ಬೇಡಲಿ!"

"ರಮೇಶ, ನೀನು ನಿಜವಾಗಿಯೂ ನನ್ನನ್ನು ಪ್ರೀತಿಸುವೆಯಾ?"

"ಹೌದು, ಮುಕುಂದನು ಚೈತನ್ಯನ ಪ್ರಾಣಸ್ನೇಹಿತ."

"ರಮೇಶ, ನಿನಗಾಗಿ ತೊಳಲಿ ತೊಳಲಿ ಬಳಲಿದ್ದೇನೆ. ನನ್ನವರು ನಿನ್ನನ್ನು ಬಲಾತ್ಕಾರದಿಂದ ಕರೆದುಕೊಂಡು ಹೋಗಲು ಬಂದಾಗ ಅವರನ್ನು ತಡೆದೆ!"

ಚೈತನ್ಯನ ನಿರ್ಜೀವ ದೇಹವನ್ನು ಸ್ಮಶಾನಕ್ಕಾಗಿ ಎಳೆದೊಯ್ಯುತ್ತಿದ್ದರು! ಇರಲಿ, ಆ ಸಹಾಯ ಮಾಡಿದ್ದಕ್ಕಾಗಿ ಮುಕುಂದನಿಗೆ ಚೈತನ್ಯನ ಅಭಿನಂದನ!

"ಸಮಸ್ತ ಪ್ರಪಂಚವೂ ಐಕ್ಯಾಪೇಕ್ಷಿಯಾಗಿರಲು ರಮೇಶನು ಮಾತ್ರ ಕೃಪಣನಂತೆ ಅನೈಕ್ಯಕ್ಕೆ ಎಳಸಬಾರದು. ಗಂಗೆ ಯಮುನೆಯರ ಸಂಗಮಸ್ಥಳವು ರಮೇಶ ಇಂದಿರೆಯರ ಸಂಗಮಸ್ಥಳವಾಗಲಿ!"

"ಸಿದ್ಧನಾಗಿದ್ದೇನೆ, ನನಗೆ ಮರಣ ಭೀತಿಯಿಲ್ಲ. ಚೈತನ್ಯನು ಮುಕುಂದನು ಇಚ್ಛೆಪಟ್ಟರೆ, ಅವನೊಡನೆ ನದಿಗೆ ಹಾರಲು ಹಿಂಜರಿಯನು."

"ರಮೇಶ, ಇದೇನು ವಿಪರೀತ! ನದಿಗೆ ಹಾರುವುದು ನನ್ನ ಭಾವವಲ್ಲ."

"ಹಾಗಾದರೆ ಮತ್ತೇನು? ಚೈತನ್ಯನು ಇದುವರೆಗೂ ಮುಕುಂದನನ್ನು ಬೇರೆ ಎಂದು ತಿಳಿದಿರಲಿಲ್ಲ. ಇನ್ನು ಮುಂದೆಯೂ ಹಾಗೆ ತಿಳಿಯುವುದಿಲ್ಲ."

"ನಾನು ನಿನ್ನ ಕೈಹಿಡಿದ ಹೆಂಡತಿ!"

"ನೀನು ನನ್ನ ಜೀವದ ಗೆಳೆಯ!"

"ಇಂದಿರೆಯನ್ನು ನೀನು ಪ್ರೀತಿಸಿರಲಿಲ್ಲವೆ?"

"ಇಲ್ಲ, ಮುಕುಂದನನ್ನು ಮಾತ್ರ ಪ್ರೀತಿಸುತ್ತಿದ್ದೆ!"

"ರಮೇಶ, ಗುರುವಿನ ಅಪ್ಪಣೆಯನ್ನೂ ಆಶೀರ್ವಾದವನ್ನೂ ಪಡೆದುಕೊಂಡು ಬಂದಿದ್ದೇನೆ."

"ಏನು? ಗುರುದೇವನೂ ಒಪ್ಪಿದನೇ!"

"ಹೌದು; ಆತನು ಮಹಾತ್ಮನು. ನೀನು ಒಪ್ಪದಿದ್ದರೆ ನನಗೆ ಸಂಗಮಸ್ಥಳವೇ ಗತಿ."

"ಆ ಮೇಲೆ, ನನಗೂ ಅದೇ ಗತಿ!"

"ನೋಡು, ರಮೇಶ, ತಿಂಗಳ ಬೆಳಕು ಎಷ್ಟು ರಮಣೀಯವಾಗಿದೆ!"

"ಹೌದು ಮುಕುಂದ, ಅತ್ಯಂತ ಶಾಂತವಾಗಿದೆ."

"ನಾನು ಅಬಲೆ!"

"ಮುಕುಂದನು ಹಾಗೆನ್ನುವುದು ಉಚಿತವಲ್ಲ."

"ರಮೇಶ, ಹತಭಾಗಿನಿಯಾದ ನನ್ನನ್ನು ಕಾಪಾಡು. ಮರುಭೂಮಿಯಾದ ನನ್ನನ್ನು ಉದ್ಯಾನವನವನ್ನಾಗಿ ಮಾಡು. ನನ್ನನ್ನು ತಿರಸ್ಕರಿಸಬೇಡ! ನಾನು ನಿನ್ನ ಸಹಧರ್ಮಿಣಿ! ನಿನ್ನ ವೀರತ್ವ ನನಗಿಲ್ಲ. ನಾನು ಅಬಲೆ! ಕಾಪಾಡು! ಕಾಪಾಡು!"

ಹೀಗೆಂದು ಇಂದಿರೆ ಚೈತನ್ಯನಿಗೆ ಅಡ್ಡ ಬಿದ್ದು, ಕಾಲುಹಿಡಿದುಕೊಂಡು ಕಣ್ಣೀರು ಸುರಿಸಿ ಹೊರಳಾಡಿ ಗೋಳಿಟ್ಟಳು. ಚೈತನ್ಯನು ಎದೆಯಮೇಲೆ ಕೈಕಟ್ಟಿಕೊಂಡು ವಿಶಾಲವಾದ ಗಗನದೆಡೆ ಶೂನ್ಯದೃಷ್ಟಿಯಿಂದ ನೋಡುತ್ತಾ ಆಲೋಚನಾಮಗ್ನನಾದನು. ಅವನ ಮನದಿಂದ ಇಂದಿರೆಯ ಹೊರತು ಸಮಸ್ತ ವಿಶ್ವವೂ ಮರೆಯಾಯಿತು. ಚಂದ್ರ, ತಾರೆ, ಗಗನ, ನದಿ, ವನ ಎಲ್ಲವೂ ಕನಸಿನಂತೆ ಕಂಪಿಸಿ ಅಳಿಮಹೋದುವು. ಅವನ ಭಾಗಕ್ಕೆ ಎಲ್ಲವೂ ಕಗ್ಗತ್ತಲಾಯಿತು. ತನ್ನಷ್ಟಕ್ಕೆ ತಾನೆ "ಗುರುದೇವ! ಗುರುದೇವ!" ಎಂದು ಗಟ್ಟಿಯಾಗಿ ಕೂಗಿಕೊಂಡನು.

"ಏನು ಚೈತನ್ಯ?" ಎಂದು ಯಾರೋ ಹೇಳಿದ ಹಾಗಾಯಿತು.

ಹಿಂದಿರುಗಿ ನೋಡಿದನು; ಪ್ರೇಮಾನಂದಸ್ವಾಮಿ ಮರಳುದಿಣ್ಣೆಯ ಮೇಲೆ ಮೂರ್ತಿಮತ್ತಾದ ಮಹಿಮೆಯಂತೆ ಆಜಾನುಬಾಹುವಾಗಿ ನಿಂತಿದ್ದನು. "ಏನು ಚೈತನ್ಯ?" ಎಂದು ಬಳಿಗೆ ಬಂದು ಪದತಳದಲ್ಲಿ ನಿರಾವಲಂಬವಾಗಿ ಬಿದ್ದ ಬಳ್ಳಿಯಂತೆ ತೋರಿದ ಇಂದಿರೆಯನ್ನೂ, ಯಾವ ಬಿರುಗಾಳಿಗೂ ಕಂಪಿಸದೆ ನಿಂತ ಮಹೀರುಹದಂತೆ ಕೈಕಟ್ಟಿಕೊಂಡು ನಿಂತಿದ್ದ ಚೈತನ್ಯನನ್ನೂ ನೋಡಿದನು!

ಚೈತನ್ಯನು ಗುರುವಿಗೆ ಕೈಮುಗಿದು ಸ್ವಲ್ಪ ಶೋಕಮಿಶ್ರವಾದ ಧ್ವನಿಯಿಂದ "ಗುರುದೇವ" ಎಂದನು.

ಗುರುದೇವನು "ಚೈತನ್ಯ, ಇದೇ ಸೃಷ್ಟಿಯ ಸಮಸ್ಯೆ: ಒಬ್ಬನು ಮುಕ್ತ, ಒಬ್ಬನು ಮುಮುಕ್ಷು, ಒಬ್ಬನು ಬದ್ಧ! ಒಂದು ಅವ್ಯಕ್ತ, ಒಂದು

ವ್ಯಕ್ತ, ಒಂದು ಮಾಯೆ! ಇದೇ ಭಗವಂತನ ಲೀಲೆ."

"ಗುರುದೇವ, ಮುಂದೇನು ಮಾಡಲಿ!"

"ನೀನು ಸ್ವತಂತ್ರನು. ನನ್ನ ಅನುಜ್ಞೆಯಿದೆ. ನನ್ನ ಆಶೀರ್ವಾದವಿದೆ. ಏನುಬೇಕಾದರೂ ಮಾಡು! ಏನು ಮಾಡಿದರೂ ನೀನು ಹಾಳಾಗುವುದಿಲ್ಲ; ನೀನು ಒಪ್ಪದಿದ್ದರೆ ಇಂದಿರೆಯ ಜನ್ಮವು ಸಾರ್ಥಕವಾಗುವುದಿಲ್ಲ!"

ಹೀಗೆಂದು ಗುರುದೇವನು ಹಿಂದಿರುಗಿ ಹೊರಟುಹೋದನು. ಚೈತನ್ಯನು ಕೆಳಗೆ ಬಿದ್ದಿದ್ದ ಇಂದಿರೆಯನ್ನು ನೋಡಿದನು. ಅವಳನ್ನು ಮೆಲ್ಲಗೆ ಹಿಡಿದೆತ್ತಿ "ಇಂದಿರಾ ಏಳು? ರಮೇಶನು ನಿನ್ನವನು!" ಎಂದನು.

ಗಂಗೆ ಯಮುನೆಯರು ಹರಿಯತೊಡಗಿದರು. ನಿಂತಿದ್ದ ಚಂದ್ರನು ಇಮ್ಮಡಿಯಾದ ಕಾಂತಿಯಿಂದ ಬೆಳಗಿ ಸಂಚರಿಸತೊಡಗಿದನು. ತಾರೆಗಳು ಆನಂದದಿಂದ ಮಿಣುಕಿದುವು. ಕೌಮುದಿಯ ಸಾಂದ್ರತೆ ಹೆಚ್ಚಿತು. ಸೃಷ್ಟಿ ಚಕ್ರ ಎಂದಿನಂತೆ ತಿರುಗತೊಡಗಿತು.

ಇಂದಿರೆ ಕಂಬನಿಗರೆಯುತ್ತಿದ್ದ ರಮೇಶನನ್ನು ಅಪ್ಪಿ ಹೇಳಿಕೊಂಡಳು: "ನೀನೀಗ ನಿಜವಾಗಿಯೂ ಸಂನ್ಯಾಸಿ!"



# ಕ್ರಿಸ್ತನಲ್ಲ, ಪಾದ್ರಿಯ ಮಗಳು!

---

ನಾನವನ ಹೆಸರು ಹೇಳೆನು. ಅವನೀಗ ಹೆಸರಿಲ್ಲದವನಾಗಿದ್ದಾನೆ. ಈ ಜಗತ್ತಿನಲ್ಲಿ ಅವನ ಹೆಸರು ಹೇಳುವವರೇ ಇಲ್ಲ. ಹಿಂದಿದ್ದ ತನ್ನ ಉಜ್ಜ್ವಲ ಪುರುಷಕಾರವನ್ನೆಲ್ಲ ಕಳೆದುಕೊಂಡ ಅವನು ಈಗ ಬರಿಯ ಶೂನ್ಯ!

ಎಂಟು ವರ್ಷಗಳ ಹಿಂದೆ ಮಹಾರಾಜಾ ಕಾಲೇಜಿನಲ್ಲಿ ಅವನ ಹೆಸರು ಕೇಳದವರೇ ಇರಲಿಲ್ಲ. ಅವನ ವಿಷಯವಾಗಿ ಮಾತಾಡದವರೇ ಇರಲಿಲ್ಲ. ಅವನನ್ನು ಗಣನಕ್ಕೆತ್ತದವರೇ ಇರಲಿಲ್ಲ. ಅವನ ಭವಿಷ್ಯತ್ತು

ಬಹಳ ತೇಜೋಮಯವಾಗುವುದೆಂದು ಹಿಗ್ಗದವರೇ ಇರಲಿಲ್ಲ. ದೇಶಕ್ಕೆ ಇವನಿಂದ ಕೀರ್ತಿ ಬರುವುದೆಂದು ನಂಬದವರೇ ಇರಲಿಲ್ಲ. ಇದು ನನ್ನ ಸ್ವಂತ ಅನುಭವ. ಕಣ್ಣಾರ ಕಂಡಿದ್ದು ; ಕಿವಿಯೊರ ಕೇಳಿದ್ದು. ಅಂಥಾ ವ್ಯಕ್ತಿ ಈಗ ಹೆಸರಿಲ್ಲದೆ "ಅವನು" ಆಗಿಬಿಟ್ಟಿದ್ದಾನೆ.

ಅವನು ನನ್ನ ಸಹಪಾಠಿ, ನನ್ನ ಗೆಳೆಯ. ನನ್ನ ಅಂತರಂಗದ ಗುರುವೂ ಆಗಿದ್ದನು. ಅವನು ಉನ್ನತಾದರ್ಶಗಳೆಂಬ ತನ್ನ ರೆಕ್ಕೆಗಳ ಸಹಾಯದಿಂದ ಯಾವಾಗಲೂ ಅಂತರಿಕ್ಷದಲ್ಲಿಯೇ ಸಂಚರಿಸುತ್ತಿದ್ದನು. ಭೂಮಿಯಮೇಲೆ ಒಂದು ಅರೆಕ್ಷಣವೂ ಹರಿದಾಡಲೊಲ್ಲನು. ಅವನನ್ನು ಕಂಡರೆ ವಿದ್ಯಾರ್ಥಿಗಳಿಗೆಲ್ಲ ತುಂಬಾ ಗೌರವ. ಅವನ ಶೀಲ, ಘನತೆ, ಅಮಲತೆ, ಬುದ್ಧಿಶಕ್ತಿ, ಪ್ರತಿಭೆ, ತೇಜಸ್ಸು ಇವುಗಳನ್ನು ನೋಡಿ ಪ್ರೊಫೆಸರುಗಳು ಕೂಡ ಅವನನ್ನು ಅತ್ಯಾದರದಿಂದ ಕಾಣುತ್ತಿದ್ದರು. ಕಾಲೇಜಿನ ಸಂಘಗಳಲ್ಲಿ ಅವನು ಉಪನ್ಯಾಸ ಮಾಡುವನೆಂದರೆ ಬಹಳಮಂದಿ ಸೇರುತ್ತಿದ್ದರು.

ಅವನು ಓದಿದ ಜೀವನಚರಿತ್ರೆಗಳಿಗೆ ಲೆಕ್ಕವೇ ಇಲ್ಲ. ಮಹಾತ್ಮರು, ಋಷಿಗಳು, ಸಾಧುಗಳು, ಕವಿಗಳು, ಶಿಲ್ಪಿಗಳು, ಚಿತ್ರಗಾರರು, ಯೋಧರು ಮೊದಲಾದವರ ಜೀವಮಾನಗಳನ್ನೆಲ್ಲ ಓದಿ ಮನನ ಮಾಡಿದ್ದನು. ಆಂಗ್ಲೇಯ ಕವಿಗಳನ್ನೆಲ್ಲ ಓದಿ ಅವರ ಉನ್ನತಾದರ್ಶಗಳನ್ನೇ ಅನುಸರಿಸುತ್ತಿದ್ದನು. ತನ್ನ ಜೀವಮಾನವನ್ನೆಲ್ಲ ದೇಶಸೇವೆಗಾಗಿ ಧಾರೆ ಎರೆಯುವೆನೆಂದು ಅವನೇ ಹೇಳುತ್ತಿದ್ದುದನ್ನು ಕೇಳಿ ಹಿಗ್ಗುತ್ತಿದ್ದೆನು. ಭಾರತ ಮಾತೆಯ ಸೇವೆಗಾಗಿ ಸದಾ ಬ್ರಹ್ಮಚಾರಿಯಾಗಿರುವೆನೆಂದು ಅವನು ಸಿಂಹ ಕಂಠದಿಂದ ನುಡಿಯುತ್ತಿದ್ದುದನ್ನು ಕೇಳಿ ನನಗೆ ರೋಮಾಂಚವಾಗುತ್ತಿತ್ತು. ಅವನ ಮುಂದೆ ನಮ್ಮ ಪುರುಷಕಾರಗಳು ಮೂಲೆ ಸೇರುತ್ತಿದ್ದುವು. ಅವನದು ಒಂದು ವಿಧವಾದ ನಾಯಕ ವ್ಯಕ್ತಿತ್ವವಾಗಿತ್ತು.

ಕ್ರೈಸ್ತ ಪಾದ್ರಿಗಳನ್ನೂ ಕ್ರಿಸ್ತಮತ ಪ್ರಚಾರಕರನ್ನೂ ಕಂಡರೆ ಮಾತ್ರ ಅವನಿಗೆ ಸ್ವಲ್ಪವೂ ಆಗುತ್ತಿರಲಿಲ್ಲ. ಅವರು ಮೋಸಗಾರರೆಂದು ನಿಂದಿಸುತ್ತಿದ್ದನು. ಇದು ಅವನಲ್ಲಿ ಬೇರೂರಿಬಿಟ್ಟದ್ದಿತು. ಹಿಂದೂ ಸಮಾಜನನ್ನು ಸುಧಾರಿಸಬೇಕೆಂದೂ ಅದರ ಕುಂದು ಕೊರತೆ ನ್ಯೂನತೆಗಳನ್ನು

ಬೇರು ಸಹಿತ ಕೀಳಬೇಕೆಂದೂ ಕ್ರೈಸ್ತರಾದ ಹಿಂದುಗಳನ್ನು ಶುದ್ಧಿಮಾಡಿ ಹಿಂದಕ್ಕೆ ತೆಗೆದುಕೊಳ್ಳಬೇಕೆಂದೂ ಕ್ರೈಸ್ತ ಪಾದ್ರಿಗಳ ಹಾವಳಿಯನ್ನು ನಿಲ್ಲಿಸಬೇಕೆಂದೂ ಅವನ ಧ್ಯೇಯ.

ಅವನು ಆಗಲೇ ಮಾಸಪತ್ರಿಕೆಗಳಿಗೆ ಅನೇಕ ಲೇಖನಗಳನ್ನು ಬರೆದಿದ್ದನು. ಆ ಲೇಖನಗಳನ್ನು ಓದಿದವರು ಅವುಗಳ ಶೈಲಿ, ಶಬ್ದ ಸಮುದಾಯಗಳ ಸರಳತೆ, ವಿಷಯಗಳನ್ನು ಹೇಳುವ ರೀತಿ, ಮೊದಲಾದುವುಗಳನ್ನು ನೋಡಿ ಬೆರಗಾಗುತ್ತಿದ್ದರು. ಅವನೊಬ್ಬ ಪ್ರತಿಭಾಶಾಲಿಯೆಂದು ಎಲ್ಲರೂ ತಿಳಿದಿದ್ದರು. ಅಂಥ ಮಹನೀಯನ ವ್ಯಕ್ತಿತ್ವ ಶೂನ್ಯವಾದುದೇ ಅತ್ಯಾಶ್ಚರ್ಯ.

ಎಂ.ಎ. ಡಿಗ್ರಿ ತೆಗೆದುಕೊಂಡಮೇಲೆ ಅವನೂ ನಾನೂ ಅಗಲಿದೆವು. ಆದರೇನು? ಅವನ ಲೇಖನಗಳನ್ನು ಮಾಸಪತ್ರಿಕೆಗಳಲ್ಲಿ ಓದಿ ಆನಂದಿಸುತ್ತಿದ್ದೆ. ಆಗಾಗ್ಗೆ ಅವನ ಅಮೂಲ್ಯವಾದ ಕಾಗದಗಳೂ ಬರುತ್ತಿದ್ದುವು. ಹೀಗೆ ಮೂರು ವರ್ಷ ಜಾರಿದುವು. ಆಮೇಲೆ ಅವನ ಪತ್ರಗಳು ಬರುವುದು ವಿರಳವಾಗಿ ಕಡೆಗೆ ನಿಂತೇಹೋದವು. ಮಾಸಪತ್ರಿಕೆಗಳಲ್ಲಿ ಅವನ ಲೇಖನಗಳು ಬರುವುದು ನಿಂತುಹೋಯಿತು. ನಾನು ಯಾರು ಯಾರನ್ನೋ ವಿಚಾರಿಸಿದೆ. ಆದರೆ ಅವನ ಸುದ್ದಿ ತಿಳಿಯದೇ ಹೋಯಿತು. ಕ್ರಮೇಣ ಅವನ ನೆನಪೂ ಮನಸ್ಸಿನ ದಿಗಂತದ ಮಬ್ಬಿನಲ್ಲಿ ಮಾಸಿಹೋಯಿತು.

ಕೆಲವು ದಿನಗಳ ಹಿಂದೆ ಗೇರುಸೊಪ್ಪೆ ಜಲಪಾತದ ಸೊಬಗನ್ನು ನೋಡಿಕೊಂಡು, ಆಗುಂಬೆ ಘಾಟಿಯಿಂದ ಅರಬ್ಬೀ ಸಮುದ್ರದಲ್ಲಾಗುವ ಸೂರ್ಯಾಸ್ತಮಯದ ವೈಭವವನ್ನು ನೋಡಬೇಕೆಂಬ ಕುತೂಹಲದಿಂದ ಶಿವಮೊಗ್ಗೆಯಲ್ಲಿ ಮೋಟಾರು ಹತ್ತಿ ಹೊರಟಿದ್ದೆ. ರಸ್ತೆಯ ಪಕ್ಕದಲ್ಲಿಯೂ ದೂರದಲ್ಲಿಯೂ ರಮಣೀಯವಾದ ಸಹ್ಯಾದ್ರಿ ಪರ್ವತಗಳು ನನಗೆ ಸುಖಾಗಮನ ಬಯಸುತ್ತಿದ್ದುವು. ಅವುಗಳ ಸೊಬಗನ್ನು ನೋಡಿ ಕಣ್ಣಿಗೆ ಹಬ್ಬವಾಯಿತು. ಹೃದಯ ಆನಂದದಿಂದ ಉಬ್ಬಿತು. ಆನಂದ ಆವೇಶಗಳ ಭರದಲ್ಲಿ "ಸಹ್ಯಾದ್ರಿ" ಎಂಬ ಐನೂರು ಅಥವಾ ಆರುನೂರು ಪಂಕ್ತಿಗಳುಳ್ಳ ಪದ್ಯವನ್ನು ರಚಿಸಬೇಕೆಂದು ಮನಸ್ಸಾಗಿ ಒಂದೆರಡು ಪಂಕ್ತಿಗಳನ್ನೂ ರಚಿಸಿ, ಮೆಲ್ಲಗೆ,

ಸಹ್ಯಾದ್ರಿಗಳ ಸಾಲು ಮೆರೆಯುತಿದೆ ನೋಡು,
ಸ್ವಾತಂತ್ರ್ಯಲೋಲರಿಗೆ ಇದು ಸೊಗದ ಬೀಡು.
ದುರ್ಗಗಳ ರಚಿಸಿದರು ವೀರವರರಿಲ್ಲಿ,
ಸ್ವರ್ಗವನು ಯೋಗಿಗಳು ಸಾಧಿಸಿದರಲ್ಲಿ!

ಎಂಬುದಾಗಿ ಹಾಡಿಕೊಂಡೆ.

ಮೋಟಾರು ಮಧ್ಯೆ ಒಂದೂರಿನಲ್ಲಿ ನಿಂತಿತು. ಆ ಊರಿನ ಹೆಸರು ನಾನು ಹೇಳೆನು. ಹೆಸರಿಲ್ಲದವನ ಊರಿನ ಹೆಸರು "ಒಂದೂರು" ಎಂದಿರಲಿ! ಅಂತೂ "ಅವನು" ಆ "ಒಂದೂರಿನ" ನಿವಾಸಿ. ಮೋಟಾರು ನಿಂತದ್ದು ಒಂದು ಜವಳಿ ಅಂಗಡಿಯ ಪಕ್ಕದಲ್ಲಿ; ಅಂದರೆ ಒಂದು ಹೋಟಲಿನ ಎದುರಿನಲ್ಲಿ. ನಾನು ಆ ಊರಿಗೆ ಹೊಸಬನಾದ್ದರಿಂದ ಕುತೂಹಲದಿಂದ ಎಲ್ಲವನ್ನೂ ದೃಷ್ಟಿಸಿ ನೋಡುತ್ತಿದ್ದೆ. ಆಗ ಹೋಟಲಿನಲ್ಲಿ ಕಾಫಿ ಕುಡಿಯುತ್ತಿದ್ದ ಒಂದು ವ್ಯಕ್ತಿ ನನ್ನನ್ನೇ ದುರುದುರನೆ ನೋಡುತ್ತಿದ್ದುದನ್ನೂ ಕಂಡೆ. ನಾನೂ ಅವನನ್ನು ಚೆನ್ನಾಗಿ ಪರೀಕ್ಷಿಸಿ ನೋಡುತ್ತಿದ್ದೆ. ಆದರೆ ಅಪರಿಚಿತನಾದವನನ್ನು ಎವೆಯಿಕ್ಕದೆ ನೋಡುವುದು ಸರಿಯಲ್ಲವೆಂದು ಬೇರೆ ಕಡೆಗೆ ಮುಖ ತಿರುಗಿಸಿದೆ.

ಪ್ರಯಾಣಿಕರೆಲ್ಲರೂ ಮೋಟಾರಿನಿಂದ ಇಳಿದುಹೋಗಿ ಕಾಫಿ ಕುಡಿಯುವುದೋ ತಿಂಡಿ ತಿನ್ನುವುದೋ, ನಶ್ಯ ಹಾಕಿಕೊಳ್ಳುವುದೋ, ಬೀಡಿ ಸಿಗರೇಟು ತೆಗೆದುಕೊಳ್ಳುವುದೋ ಇವೇ ಮೊದಲಾದ ಅನಿವಾರ್ಯ ಕಾರ್ಯಗಳಲ್ಲಿ ತೊಡಗಿದ್ದರು. ಡ್ರೈವರು ಕೂಡ ಮೋಟಾರಿನಲ್ಲಿರಲಿಲ್ಲ. ನಾನೊಬ್ಬನೇ ಕೂತಿದ್ದೆ.

ಅಷ್ಟರಲ್ಲಿ ಯಾರೋ ನನ್ನನ್ನು ಎಡಗಡೆಯಿಂದ ಕರೆದ ಹಾಗಾಗಿ, ಬಲಗಡೆ ನೋಡುತ್ತಿದ್ದವನು ಆ ಕಡೆಗೆ ತಿರುಗಿದೆ. ಹೋಟಲಿನಲ್ಲಿ ಕುಳಿತಿದ್ದ ಅಪರಿಚಿತ ವ್ಯಕ್ತಿ ಮೋಟಾರಿನ ಪಕ್ಕದಲ್ಲಿ ಬಂದು ನಿಂತಿದ್ದನು.

ನಾನು ಅವನ ಕಡೆ ತಿರುಗಲು "ಸ್ವಾಮಿ, ದಯವಿಟ್ಟು ಕ್ಷಮಿಸಬೇಕು; ತಮ್ಮೂರು ಯಾವುದು?" ಎಂದನು.

ನನ್ನ ಊರಿನ ಹೆಸರು ಹೇಳಿದೆ. ಅದನ್ನು ಕೇಳಿ ಅವನು ವಿಸ್ಮಯಪಟ್ಟವನಾದರೂ ಉತ್ತರ ಕ್ಷಣದಲ್ಲಿಯೇ ನಗುಮುಖನಾದನು. ಮತ್ತೆ

ನೆಲದ ಕಡೆ ನೋಡುತ್ತಾ ಏನನ್ನೋ ಯೋಚಿಸುತ್ತಾ ನಿಂತನು. ಅದು ವರೆಗೆ ನಾನು ಅವನನ್ನು ಚೆನ್ನಾಗಿ ದೃಷ್ಟಿಸಿರಲಿಲ್ಲ; ನನ್ನೊಡನೆ ಸಂಭಾಷಿಸುವಾಗ ಹಾಗೆ ಮಾಡಲು ಸಮಯ ಸಿಕ್ಕಿತು.

ವ್ಯಕ್ತಿಯನ್ನು ಮೊದಲು ನೋಡಿದಾಕ್ಷಣ ಜನಿಸಿದ ಭಾವವು ಅಸಹ್ಯ ಎಂದು ತೋರಿತು. ಅವನು ಸಾಧಾರಣ ಮನುಷ್ಯನಷ್ಟು ಎತ್ತರವಿದ್ದರೂ ಸೊರಗಿ ಕೃಶವಾಗಿದ್ದನು. ಅವನ ಮುಖದಲ್ಲಿ ತೇಜಸ್ಸು ತಿಲಮಾತ್ರವಾದರೂ ಇರಲಿಲ್ಲ. ಕಣ್ಣುಗಳಲ್ಲಿ ಕಾಂತಿಯ ಸುಳಿವೇ ಇಲ್ಲದೆ ಹೆಣದ ಕಣ್ಣುಗಳಂತಾಗಿದ್ದುವು; ಕೆನ್ನೆ ಕಣಿವೆಗಳಾಗಿದ್ದುವು; ಚರ್ಮ ಸುಕ್ಕು ಬಿದ್ದಿತ್ತು; ಕಣ್ಣುಗುಡ್ಡೆ ಒಳಹೊಕ್ಕು ಹೋಗಿದ್ದುವು. ತುಟಿ ಕರ್ರಗಿದ್ದುವು; ಬಾಚಿ ಶುಚಿಮಾಡದ ಅವನ 'ಕ್ರಾಪಿ' ನಿಂದ ದುರ್ವಾಸನೆ ಹೊರಡುತ್ತಿತ್ತು; ಅವನು ಉಟ್ಟಿದ್ದ ಉಡುಪು ಕೊಳಕಾಗಿತ್ತು. ಪಂಚೆಯೊಂದನ್ನು ಅಡ್ಡ ಸುತ್ತಿ ಬನಿಯನ್ ಹಾಕಿಕೊಂಡಿದ್ದನು. ಅದೂ ಹರುಕಲು।

ನೆಲದ ಕಡೆ ನೋಡುತ್ತಿದ್ದವನು ತಲೆಯೆತ್ತಿ "ನೀವು ಮೈಸೂರಿನಲ್ಲಿ ಮಹಾರಾಜಾ ಕಾಲೇಜಿನಲ್ಲಿ ಓದುತ್ತಿರಲಿಲ್ಲವೆ ?" ಎಂದನು.

ನನಗೆ ಸ್ವಲ್ಪ ಆಶ್ಚರ್ಯವಾಯಿತು. "ಹೌದು" ಎಂದೆ.

"ನಿಮಗೆ ನನ್ನ ಪರಿಚಯವುಂಟೆ ?"

"ಇಲ್ಲವಲ್ಲ !"

"ಎಲ್ಲಾದರೂ ನೋಡಿದ ನೆನಪುಂಟೆ ?"

ನನಗೆ ತುಂಬಾ ಬೇಸರವಾಯಿತು. "ಇವನಿಗೇಕೆ ನನ್ನ ಚರಿತ್ರೆ! ಇವನ ಪರಿಚಯದಿಂದ ನನಗೆ ಆಗಬೇಕಾದುದೇನು ?" ಎಂದು ಮನಸ್ಸಿನಲ್ಲಿಯೇ ಯೋಚಿಸಿ "ಇಲ್ಲ, ಎಲ್ಲಿಯೂ ನೋಡಿದ ನೆನಪಿಲ್ಲ" ಎಂದೆ.

"ಹೋಗಲಿ, ನಿಮ್ಮ ರೂಂಮೇಟಿನ ಜ್ಞಾಪಕವಿದೆಯೆ ?" ಎಂದನು.

'ರೂಂಮೇಟ್' ಎನ್ನುವಾಗ ಅವನ ಬೆಳಕಿಲ್ಲದ ಕಣ್ಣುಗಳು ಥಳಥಳ ಬೆಳಗಿದುವು. ಮಿಂಚಿನಂತೆ ಎಲ್ಲಿಂದಲೋ ಕ್ಷಣಮಾತ್ರ ಅವುಗಳಿಗೆ ಕಾಂತಿ ಬಂದು ತೊಲಗಿತು.

ವ್ಯಕ್ತಿಯ ಮುಖದ ಕಡೆ ನೋಡಿದೆನು. ಏಕೆ ನಿಷ್ಕಾರಣವಾಗಿ

ತಳಮಳಿಸಿತು.

'ಓಹೋ! ಅವನ ಜ್ಞಾಪಕವಿಲ್ಲದೆ ಏನು? ಅವನ ಹೆಸರು—ಎಂ. ಧ....." ಎಂದು ಹೆಸರನ್ನು ಪೂರ್ತಿಮಾಡುವ ಮೊದಲೇ ಆ ವಿಲಕ್ಷಣ ಪುರುಷನು "ಬೇಡ! ಬೇಡ! ಆ ಹೆಸರನ್ನು ಉಚ್ಚರಿಸಬೇಡಿ!" ಎಂದು ಕೂಗಿಕೊಂಡನು. ಅವನ ಮುಖದ ಮೇಲೆ ತೇಜಸ್ಸು ಕ್ಷಣಮಾತ್ರ ಮಿಂಚಿ ಮಾಯವಾಯಿತು. ನನಗೆ ಯಾವುದೋ ಪೂರ್ವಸ್ಮರಣೆ ಯಾದಂತಾಗಿ ಬೆಚ್ಚಿದೆನು. ಆ ವ್ಯಕ್ತಿಯ ಸೊರಗಿದ ಮುಖವನ್ನು ತೀಕ್ಷ್ಣದೃಷ್ಟಿಯಿಂದ ನೋಡಿದೆನು. ಸ್ಮೃತಿ ಎಚ್ಚತ್ತಂತಾಗಿ ಮನಸ್ಸಿನಲ್ಲಿಯೆ "ಅವನೇ ಇವನೇ? ಅವನೇ ಇವನು!" ಎಂದಂದುಕೊಂಡೆ. ಮತ್ತೆ ಆ ರುಚಿಸದ ಆಲೋಚನೆಯನ್ನು ದೂರಮಾಡುವುದಕ್ಕಾಗಿ "ಛೇ ಅವನೆಲ್ಲಿ, ಇವನೆಲ್ಲಿ! ಸಿಂಹವೆಲ್ಲಿ, ಶುನಕವೆಲ್ಲಿ?" ಎಂದು ಆಲೋಚಿಸಿದೆ.

ಸ್ವಲ್ಪ ಹೊತ್ತು ಮೌನವಾಗಿದ್ದ ಅವನು "ಅವನು ಸತ್ತುಹೋದ!" ಅಂದನು.

ನನ್ನ ಎದೆಗೆ ಸಿಡಿಲು ಬಡಿದಂತಾಗಿ "ಯಾರು?" ಎಂದೆ.

"ಅವನೇ ನಿಮ್ಮ ಗೆಳೆಯ."

"ಯಾವಾಗ? ಎಲ್ಲಿ? ಏನು ಕಾಯಿಲೆಯಾಗಿತ್ತು? ಮೇಲೆ ಬಾರಪ್ಪ ಕೂತುಕೋ." ಅವನೂ ಮೋಟಾರಿನಲ್ಲಿ ಕುಳಿತನು.

"ಸುಮಾರು ನಾಲ್ಕು ವರ್ಷದ ಹಿಂದೆ; ಇದೇ ಊರಿನಲ್ಲಿ ಖೂನಿ ಮಾಡಿದರು."

ನಾನು ಉದ್ವೇಗದ ಪ್ರವಾಹವನ್ನು ಸಹಿಸಲಾರದವನಾಗಿ "ಯಾರಪ್ಪಾ ಖೂನಿಮಾಡಿದವರು? ಏಕೆ? ಎಲ್ಲಾ ವಿಶದವಾಗಿ ತಿಳಿಸಪ್ಪಾ" ಎಂದು ಕಾತರನಾಗಿ ನುಡಿದೆ.

ಅವನು ಕಣ್ಣೀರು ಸುರಿಸುತ್ತಾ "ಕೆಲವು ಜನ ಕ್ರೈಸ್ತರು! ಅವರ ಮತಕ್ಕೆ ವಿರೋಧಿಯೆಂದು" ಎಂದನು.

ಗೆಳೆಯನ ಮರಣವಾರ್ತೆಯನ್ನು ಕೇಳಿ ನನಗೂ ಕಣ್ಣಿನಲ್ಲಿ ಬಳಬಳ ನೀರು ಬಂದಿತು! ಸಾಧಾರಣ ಮನುಷ್ಯನಾಗಿದ್ದರೆ ಅಷ್ಟು ದುಃಖವಾಗುತ್ತಿರಲಿಲ್ಲ; ಅಸಾಧಾರಣ ಪ್ರತಿಭಾಶಾಲಿ ಹೋದನಲ್ಲಾ ಎಂದು ಮರುಗಿದೆ.

ಪಕ್ಕದಲ್ಲಿ ಕೂತಿದ್ದ ಪರಕೀಯನು ಸ್ವಲ್ಪ ಹೊತ್ತಾದಮೇಲೆ "ಆದರೆ ಅವನು ಇನ್ನೂ ಬದುಕಿದ್ದಾನೆ!" ಎಂದನು

ನನಗೆ ಹುಚ್ಚು ಹಿಡಿದಂತಾಗಿ ಕೋಪದಿಂದ "ಏನು ನೀನು ಹೇಳುವುದು! ಅರ್ಥವಿಲ್ಲದ ಹರಟೆ!" ಎಂದು ಕೂಗಿದೆ.

ಅದಕ್ಕವನು ಸ್ವಲ್ಪವೂ ಕಾತರನಾಗದೆ ಉದ್ವೇಗಪಡದೆ "ಹೌದು ಜೀವಿಸಿದ್ದಾನೆ. ಸಾವಿನ ಬಾಳು" ಎಂದನು.

ಅವನನ್ನೇ ಕೇಳಿದರೆ ವಿಚಾರವೆಲ್ಲಾ ತಿಳಿಯುವುದೆಂದು ಭಾವಿಸಿ "ಈಗ ಎಲ್ಲಿದ್ದಾನೆ?" ಎಂದೆ.

ಅವನು ಮೋಟಾರಿನ ಯಂತ್ರವನ್ನೇ ನಟ್ಟ ದಿಟ್ಟಿಯಿಂದ ನೋಡುತ್ತಾ "ಇಲ್ಲಿಯೇ" ಎಂದನು.

"ಎಲ್ಲಿ? ಬಾ ಹೋಗೋಣ. ನಿನಗೇನಾದರೂ ಕೊಡುತ್ತೇನೆ" ಎಂದು ಎದ್ದೆ.

ಅವನು ಕೂತ ಜಾಗದಿಂದ ಕದಲದೆ "ಇಲ್ಲಿಯೇ! ನಿಮ್ಮ ಪಕ್ಕದಲ್ಲಿ!" ಎಂದನು. ನಾನು ತಿರುಗಿ ನೋಡಿದೆ. "ಅವನೇ ನಾನು. ಚಂದೂ, ನಿನಗಿನ್ನೂ ಗುರುತು ಸಿಕ್ಕಲಿಲ್ಲವೇ!" ಎಂದನು.

ನಾನು ಅವನ ಮಾತನ್ನು ನಂಬಲಾರದೆ ಹೋದೆ. ಅವನ ಮುಖದ ಕಡೆ ಪುನಃ ದುರದುರನೆ ನೋಡಿದೆ. ಸಂದೇಹ ನಿವೃತ್ತಿಯಾಗಲಿಲ್ಲ. "ನಿಜವಾಗಿಯೂ ನೀನು ಅವನೇ?" ಎಂದು ಕೇಳಿದೆ.

"ಹೌದು, ಚಂದೂ, ಅವನೇ! ಆ ಮಹಾತ್ಮನೇ! ಆ ಪ್ರತಿಭಾಶಾಲಿಯೇ! ಆ ದೇಶಭಕ್ತನೇ! ಆ ಸಮಾಜೋದ್ಧಾರಕನೇ! ಆ ಸದಾ ಬ್ರಹ್ಮಚಾರಿಯೇ!—ನಾನು, ಈ ದುರಾತ್ಮ! ಈ ಬುದ್ಧಿವಿಹೀನ! ಈ ದೇಶದ್ರೋಹಿ! ಈ ಸಮಾಜ ಘಾತಕ! ಈ ವಿಷಯಲಂಪಟ!"

ಹೇಳುವಾಗ ಅವನ ದೇಹವೆಲ್ಲಾ ಕಂಪಿಸಿತು. ಕಂಠ ಗದ್ಗದವಾಯಿತು. ನಯನಗಳು ನಕ್ಷತ್ರಗಳಾದುವು. ವದನವು ತೇಜಸ್ವಿಯಾಯಿತು. ವಾಕ್ಯವನ್ನು ಮುಗಿಸಿದ ಮೇಲೆ ಬಿಕ್ಕಿಬಿಕ್ಕಿ ಅತ್ತನು. ನನ್ನ ಸಂದೇಹ ನಿವೃತ್ತಿಯಾಯಿತು. ಆದರೆ ಗೆಳೆಯನನ್ನು ಆ ಸ್ಥಿತಿಯಲ್ಲಿ ಕಂಡು ಹೃದಯ ಬೆಂದುಹೋಯಿತು. ನಿಂತ ಶುನಕವಾದುದು ಹೇಗೆಂಬುದು ಮಾತು

ಬಗೆಹರಿಯದೆ ಹೋಯಿತು. ಮೊದಲು ಕೇಳಿದ ಮರಣವಾರ್ತೆಯೆ ಸತ್ಯವಾಗಿದ್ದಿದ್ದರೆ ಸಾವಿರಪಾಲು ಮೇಲಾಗುತ್ತಿತ್ತಲ್ಲಾ ಎನ್ನಿಸಿತು !

ಅವನ ಕೈ ಹಿಡಿದುಕೊಂಡು, ಹಿಂದೆ ಕರೆಯುತ್ತಿದ್ದ ಅಡ್ಡ ಹೆಸರಿನಿಂದ ಸಂಬೋಧಿಸಿ "ಯೋಗೀ, ಇದೇನಿದು ? ಮುಖದಲ್ಲಿ ಮೊದಲಿನ ತೇಜಸ್ಸಿಲ್ಲ, ಕಣ್ಣುಗಳಲ್ಲಿ ಆಗಿನ ಕಾಂತಿಯಿಲ್ಲ. ನೋಡಿದರೆ ನಿನ್ನ ಗುರುತೇ ಸಿಕ್ಕುವುದಿಲ್ಲ. ನಿನಗೇಕಪ್ಪಾ ಈ ದುರ್ಗತಿ ಬಂತು ?" ಎಂದು ಕೇಳಿದೆ.

ಅದಕ್ಕವನು ಮುಖ ಕೆಳಗೆ ತಗ್ಗಿಸಿ "ನಾನು ಕ್ರೈಸ್ತನಾದೆ" ಎಂದನು.

ನನಗೆ ಅತ್ಯಾಶ್ಚರ್ಯವಾಯಿತು. ಕ್ರೈಸ್ತ ಪಾದ್ರಿಗಳನ್ನೂ ಕ್ರಿಸ್ತಮತ ಪ್ರಚಾರಕರನ್ನೂ ನಿರ್ಮೂಲಮಾಡಬೇಕು ಎನ್ನುತ್ತಿದ್ದವನು ಕ್ರೈಸ್ತನಾದುದು ಹೇಗೆಂದು ನನಗೆ ಗೊತ್ತಾಗಲಿಲ್ಲ.

"ಯೋಗೀ, ಕ್ರೈಸ್ತಪಾದ್ರಿಗಳ ಬೋಧನೆಗೆ ನೀನೂ ಮರುಳಾದೆಯಾ ? ಅವರ ಬಲೆಯಿಂದ ತಪ್ಪಿಸಿಕೊಳ್ಳುವುದಕ್ಕೆ ನಿನಗೂ ಅಸಾಧ್ಯವಾಯಿತೇ ?" ಎಂದೆ.

"ಚಂದ್ರೂ, ಬಡಪಾದ್ರಿಗಳ ಬೋಧನೆಗೆ ನಾನು ಮರುಳಾಗುವೆನೇ! ಆ ಹುಲುಮನುಜರಿಂದ ಏನಾದೀತು ?" ಎಂದನು.

"ಏನು ಚಂದ್ರೂ, ಹೀಗೆನ್ನುವೆ ? ವೇದಾಂತ ಕೇಸರಿಯ ಗರ್ಜನೆಯ ಮುಂದೆ ಕ್ರಿಸ್ತನ ಕೇಕೆಯಂತೆ !" ಎಂದನು. ಅವನ ಹಿಂದಿನ ಗರ್ವ ಸುಳಿಸುಳಿದು ಅಡಗಿತು.

"ಹಾಗಾದರೆ ನೀನು ಕ್ರೈಸ್ತನಾದುದು ಏಕೆ ? ಜಾತಿಗೆ ಸೇರಿಸಿದವರು ಯಾರು ?"

ಅದಕ್ಕವನು ದೈನ್ಯಭಾವದಿಂದ ಹೇಳಿದನು : "ಚಂದ್ರೂ, ನಾನು ಕ್ರೈಸ್ತನಾದ ರಹಸ್ಯ ಬೇರೆ ! ನನ್ನನ್ನು ಕ್ರೈಸ್ತಜಾತಿಗೆ ಸೇರಿಸಿದ್ದು ಕ್ರಿಸ್ತನಲ್ಲ, ಪಾದ್ರಿಯ ಮಗಳು !"

ಅವನ ಕತೆಯನ್ನು ಇನ್ನೂ ವಿಶದವಾಗಿ ತಿಳಿಯಬೇಕೆಂದು ಇಚ್ಛಿಸಿ "ಅದೇನು ಸಂಗತಿ, ಯೋಗೀ ?" ಎಂದೆ.

ಅಷ್ಟರಲ್ಲಿಯೇ ಮೋಟಾರು ಕೂಗಿತು ಜನಗಳೆಲ್ಲ ಬಂದರು. ಮೋಟಾರು ಹೊರಡುವ ಸಮಯವಾಯಿತು. ಅವನಿಗೆ ನನ್ನ ವಿಳಾಸ ಕೊಟ್ಟು, ಕಾಗದದಲ್ಲಿ ವಿಷಯವೆಲ್ಲವನ್ನೂ ತಿಳಿಸುವಂತೆ ಹೇಳಿದೆ. ಅವನೂ ಒಪ್ಪಿದ. ಅವನ ವಿಳಾಸವನ್ನೂ ತೆಗೆದುಕೊಂಡೆ.

ಹೊರಡುವಾಗ "ಯೋಗೀ, ದೇವರು ನಡೆಸಿದರೆ ಮುಂದೆ ಎಲ್ಲ ಸುಖವಾಗುತ್ತದೆ. ನೀನಿನ್ನೂ ವೇದಾಂತಿ. ವೇದಾಂತಿಗೆ ವಿನಾಶವಿಲ್ಲ ನಾನು ನಿನಗೆ ಸಹಾಯಮಾಡುತ್ತೇನೆ. 'ಬುದ್ಧಿ' ಇದೆಯಷ್ಟೆ? ನಮಸ್ಕಾರ" ಎಂದು ಕೈಮುಗಿದೆ.

ಅವನೂ ಕೈಮುಗಿದ. ಮೋಟಾರು ತುತ್ತೂರಿ ಊದುತ್ತಾ ವೇಗವಾಗಿ ಸಾಗಿತು. ಅವನು ನಿರಾಶೆಯ ದೃಷ್ಟಿಯಿಂದ ನನ್ನನ್ನೇ ನೋಡುತ್ತಾ ಬೀದಿಯಲ್ಲಿ ನಿಂತಿದ್ದನು. ತುಸುಹೊತ್ತಿನಲ್ಲಿಯೇ ಕಣ್ಮರೆಯಾದನು. ಆದರೆ ಮನಸ್ಸಿನಿಂದ ಮಾತ್ರ ಮರೆಯಾಗಲಿಲ್ಲ.

೨

ನನ್ನ ವಿಹಾರಯಾತ್ರೆ ಪೂರೈಸಿ ಊರು ಸೇರಿ ಎರಡು ದಿನಗಳಾಗಿದ್ದುವು. ಆ ದಿನ ಮಧ್ಯಾಹ್ನ ಸುಮಾರು ಎರಡು ಗಂಟೆಯ ಸಮಯ. ಡೈರಿಯಲ್ಲಿ ಬರೆದಿದ್ದ ವಿಹಾರಯಾತ್ರೆಯ ವಿಚಾರ ಕುರಿತು ಓದುತ್ತಿದ್ದೆ. ಅದರಲ್ಲಿ ಹಠಾತ್ತಾಗಿ ಅವನನ್ನು ಕಂಡ ಸಂಗತಿಯನ್ನೂ ಕುರಿತು ಹೀಗೆಂದು ಬರೆದಿದ್ದೆ :—

"ಇಂದು ಚಿರಸ್ಮರಣೀಯವಾದ ದಿನ. ಏಕೆಂದರೆ ಎಂಟು ವರ್ಷಗಳಿಂದ ನೋಡದೆ ಇದ್ದ ಒಬ್ಬ ಸ್ನೇಹಿತನ ದರ್ಶನವಾಯಿತು! ಆದರೆ ಅದು ದುಃಖಮಯವಾದ ದರ್ಶನ! ಗಗನದ ನಿರ್ಮಲವಾದ ಗಾಳಿಯಲ್ಲಿ ಸ್ವತಂತ್ರವಾಗಿ ಯಾರನ್ನೂ ಲೆಕ್ಕಿಸದೆ ಸಂಚರಿಸುತ್ತಿದ್ದ ಗರುಡನು ಹುಳುವಾಗಿ ದುರ್ವಾಸನೆಯಿಂದ ಕೊಳೆತು ನಾರುವ ರೊಚ್ಚೆಯಲ್ಲಿ ಒದ್ದಾಡುತ್ತಿದ್ದುದನ್ನು ಕಂಡೆ! ಅವನಿಷ್ಟು ಅಧೋಗತಿಗೆ ಇಳಿಯುವನೆಂದು ನಾನು ಕನಸಿನಲ್ಲಿಯೂ ಭಾವಿಸಿರಲಿಲ್ಲ. ಅವನೊಡನೆ ಸ್ವಲ್ಪಹೊತ್ತು ಸಂಭಾಷಿಸಿದೆ. ಸಂಭಾಷಣೆಯಿಂದ ಅವನ ವಿಚಿತ್ರ ಕಥೆಯ ಸಂವಿಧಾನ ಮಾತ್ರ

ತಿಳಿಯಿತು. ಕಥೆಯ ವಿವರವನ್ನು ಕೂಲಂಕಷವಾಗಿ ಬರೆದು ಕಳಿಸು ತ್ತೇನೆಂದು ಭಾಷೆ ಕೊಟ್ಟಿದ್ದಾನೆ. ಯಾರು ಏನಾಗುವರೆಂದು ಹೇಳಬಲ್ಲ ವರಾರು? ವಿಶ್ವನಿಯಮದ ವೈಚಿತ್ರ್ಯವನ್ನು ಗ್ರಹಿಸುವರಾರು?"

ಇವನ್ನು ಓದಿದವನು ಧೈರಿಯನ್ನು ಮುಚ್ಚಿ ಅವನ ವಿಷಯವಾಗಿ ಚಿಂತಿಸುತ್ತಾ ಕುಳಿತೆ. ಅವನೊಡನೆ ಕಳೆದ ಕಾಲೇಜಿನ ದಿನಗಳೆಲ್ಲ ಚಿತ್ರಭಿತ್ತಿಯಲ್ಲಿ ಒಂದೊಂದಾಗಿ ಹೊಳೆದು ಅಳಿದುವು. ಆದರೆ ಅವನು ಇಂಥ ನಿಕೃಷ್ಟಾವಸ್ಥೆಗೆ ಇಳಿದ ರಹಸ್ಯವನ್ನು ಮಾತ್ರ ಭೇದಿಸಲಾರದೆ ಹೋದೆ. ಅವನು "ಕ್ರಿಸ್ತನಲ್ಲ, ಪಾದ್ರಿಯ ಮಗಳು!" ಎಂದು ಹೇಳಿದ ಮಾತಿನ ಗರ್ಭದಲ್ಲಿ ಏನೇನು ಅಡಗಿರಬಹುದೋ ಎಂದು ವಿಸ್ಮಿತನಾದೆ. ಹಾಗೆಯೇ ಯೋಚಿಸುತ್ತಾ ಅವನ ವಿಷಯವಾದ ಚಿಂತೆ ಹಗಲುಗನಸಾಗಿ ಪರಿಣಮಿಸಿತು.

ನನ್ನ ತಮ್ಮನ ಬರುವಿಕೆಯಿಂದ ಹಗಲುಗನಸಿನಿಂದ ಎಚ್ಚತ್ತೆ. ಅವನು ಅಂಚೆಯ ಜವಾನನು ಕೊಟ್ಟ ಕೆಲವು ಕಾರ್ಡುಗಳನ್ನೂ ಒಂದು ಲಕ್ಕೋಟೆಯನ್ನೂ ಮೇಜಿನಮೇಲಿಟ್ಟು ಮಹಡಿಯಿಂದ ಕೆಳಗಿಳಿದು ಹೋದ. ಕಾರ್ಡುಗಳನ್ನೆಲ್ಲಾ ಓದಿದ ತರುವಾಯ ಲಕ್ಕೋಟೆ ಒಡೆದು ನೋಡಿದೆ. ಅದು ಅವನಿಂದಲೇ ಬಂದ ಲಕ್ಕೋಟೆಯಾಗಿತ್ತು. ನನಗೆ ಸಂತೋಷಕ್ಕಿಂತ ಉದ್ವೇಗ ಕಕುಲತೆ ಹೆಚ್ಚಿದುವು. ಕುತೂಹಲಕ್ಕಿಂತಲೂ ವ್ಯಾಕುಲತೆ ಮಿತಿಮಿರಿತು. ಪತ್ರವು ಉದ್ದವಾಗಿಯೇ ಇತ್ತು. ಅದನ್ನು ಓದಲಾರಂಭಿಸಿದೆ; ಅದಕ್ಕೆ ಊರಿನ ಹೆಸರು, ತಾರೀಖು ಒಂದೂ ಇರಲಿಲ್ಲ.

"ಪ್ರೀತಿಯ ಗೆಳೆಯ ಚಂದ್ರೂಗೆ,

"ಎಲ್ಲಕ್ಕೂ ಮೊದಲು ನಿನ್ನಲ್ಲಿ ನನ್ನದೊಂದು ಬಿನ್ನಹ, ಅದೇ ನೆಂದರೆ, ನೀನು ಯಾವಾಗಲಾಗಲಿ, ಯಾವ ನೆವದಿಂದಾಗಲಿ ಎಂದೆಂದಿಗೂ ನನ್ನ ಹೆಸರನ್ನು ಬಹಿರಂಗಪಡಿಸಕೂಡದು! ನನ್ನ ಈ ಆತ್ಮಕಥೆಯನ್ನು ಮಾತ್ರ ನಿನ್ನಿಷ್ಟ ಬಂದಂತೆ ಉಪಯೋಗಿಸಬಹುದು.

"ನನ್ನೀ ಕಥೆಯನ್ನು ವಿಸ್ತಾರವಾಗಿ ಬರೆಯಲು ನನಗೆ ಇಷ್ಟವೂ ಇಲ್ಲ; ತಾಳ್ಮೆಯೂ ಇಲ್ಲ. ಆದ್ದರಿಂದ ಆದಷ್ಟು ಸಂಕ್ಷೇಪವಾಗಿ ಬರೆದು ಮುಗಿಸುತ್ತೇನೆ. ಕ್ಷಮಿಸು ಪ್ರಿಯಗೆಳೆಯ! ಅಲ್ಲದೆ ನಿರ್ಭಾಗ್ಯನಾದ

ನನ್ನ ಈ ಅಮಂಗಳಕರವಾದ ಚರಿತ್ರೆಯನ್ನು ಉದ್ದವಾಗಿ ಬರೆದು ನಿನ್ನ ಅಮೂಲ್ಯವಾದ ಕಾಲವನ್ನು ಕಳೆಯಬೇಕೆಂದರೆ ನನಗಿನಿತೂ ಸಮಾಧಾನ ವಿಲ್ಲ.

"ನಾವಿಬ್ಬರೂ ಎಂ. ಎ. ಡಿಗ್ರಿ ಪ್ಯಾಸುಮಾಡಿ ಅಗಲಿದೆವಷ್ಟೆ! ಅಲ್ಲಿಂದ ಮೂರು ವರ್ಷಗಳವರೆಗೆ ಉನ್ನತಾದರ್ಶಜೀವಿಯಾಗಿಯೇ ಇದ್ದೆ. ಅಲ್ಲಲ್ಲಿ ಸಮಾಜಸುಧಾರಕ ಸಂಘಗಳನ್ನು ಸ್ಥಾಪಿಸಿದೆ. ಉಪನ್ಯಾಸ ಗಳನ್ನು ಕೊಟ್ಟೆ. ನೀತಿಯನ್ನೂ ಬೋಧಿಸುತ್ತಿದ್ದೆ. ಉತ್ತಮವಾದ ಲೇಖನಗಳನ್ನೂ ಬರೆಯುತ್ತಿದ್ದೆ. ಅವುಗಳನ್ನು ನೀನೂ ಓದಿರಬಹುದು. ನನ್ನ ಹೆಸರೂ ಪ್ರಖ್ಯಾತವಾಯಿತು. ಕ್ರೈಸ್ತಪಾದ್ರಿಗಳ ಹಾವಳಿ ಅಡಗಿ ಸಲು ಎಷ್ಟೋ ಪ್ರಯತ್ನಪಟ್ಟೆ. ಅವರ ಕಿರುಕುಳವೂ ಕಡಿಮೆಯಾಗುತ್ತಾ ಬಂದಿತು. ಈ ವಿಷಯಗಳನ್ನೆಲ್ಲ ನಿನಗೆ ನನ್ನ ಪತ್ರಗಳ ಮೂಲಕ ತಿಳಿಸುತ್ತಿದ್ದೆ."

"ನನ್ನ ಮನೆಯವರು ಲಗ್ನಮಾಡಿಕೊಳ್ಳೆಂದು ಎಷ್ಟೋ ಹೇಳಿ ದರು. ನಾನು ಸದಾ ಬ್ರಹ್ಮಚಾರಿಯಾಗುವೆನೆಂಬ ಹೆಮ್ಮೆಯಿಂದ ಒಪ್ಪ ಲಿಲ್ಲ. ಅತ್ಯಂತ ಸುಂದರಿಯರಾದ ಬಾಲೆಯರನ್ನು ತೋರಿಸಿದರು. ಆದರೂ ನಾನು ಅವರ ಬಲೆಗೆ ಬೀಳಲಿಲ್ಲ. ಭಾರತಮಾತೆಯ ಸೇವೆಗಾಗಿ ಜೀವ ಮಾನವನ್ನೆಲ್ಲ ಧಾರೆಯೆರೆಯಬೇಕೆಂಬ ನನಗಿದ್ದ ಭಾವ ಇನ್ನೂ ಅಳಿಸಿ ಹೋಗಿರಲಿಲ್ಲ. ನನ್ನ ಆಚರಣೆ ನಮ್ಮ ಮನೆಯವರಿಗೆ ಸರಿಬೀಳಲಿಲ್ಲ. ನನ್ನನ್ನು ಕೆಲಸಕ್ಕೆ ಸೇರಲು ಹೇಳಿದರು. ಸ್ವಾತಂತ್ರ್ಯಾಭಿಲಾಷಿಯಾಗಿದ್ದ ನಾನು ಅದಕ್ಕೆ ಸಮ್ಮತಿಸಲಿಲ್ಲ. ಲಾಯರಾಗು ಎಂದರು. ವಕೀಲಿ ಕೆಲಸ ಅಧರ್ಮಕಾರ್ಯವೆಂದು ಭಾವಿಸಿದ್ದ ನಾನು ಅದಕ್ಕೂ ಒಪ್ಪಲಿಲ್ಲ. ನನ್ನಿಂದ ಕುಟುಂಬವು ಸಂಪದಭ್ಯುದಯಗಳಿಂದ ತುಂಬಿ ತುಳುಕುವುದೆಂದು ಎಲ್ಲರೂ ಮನಸ್ಸಿನಲ್ಲಿ ಮಂಡಿಗೆ ತಿನ್ನುತ್ತಿದ್ದರು. ಆದರೆ ಅವರ ಆಸೆ ಆಕಾಶದ ಅಂಬುಜವಾಯಿತು. ಈ ನನ್ನ ನಡತೆಗಳಿಂದ ಕುಟುಂಬದವರ ತಾಳ್ಮೆ ಯನ್ನು ಶೋಷಿಸಿದೆ. ಕಡೆಗೆ ನನ್ನ ಪಾಲಿಗೆ ಬರಬೇಕಾದ ಆಸ್ತಿಯನ್ನು ಹಂಚಿಕೊಟ್ಟು ನನ್ನನ್ನು ಮನೆಯಿಂದ ಹೊರಡಿಸಿದರು. ಅದಕ್ಕೂ ನಾನು ಅಂಜಲಿಲ್ಲ. ಜಮೀನನ್ನು ಒಕ್ಕಲ ಸಾಗುವಳಿಗೆ ಕೊಟ್ಟು ನಿಶ್ಚಿಂತನಾದೆ.

"ಸ್ವಂತ ಕಷ್ಟಗಳು ನನ್ನನ್ನು ಎಷ್ಟೇ ಪೀಡಿಸಿದರೂ ಲೋಕ ಹಿತಾರ್ಥವಾದ ಕಾರ್ಯಗಳನ್ನು ಮಾತ್ರ ಬಿಡಲಿಲ್ಲ. ಆದುದರಿಂದ ನಾನು ಮನೆಯವರ ಆಗ್ರಹಕ್ಕೆ ಪಾತ್ರನಾದೆನೇ ಹೊರತು ಇತರರ ಪ್ರೀತಿ ಗೌರವ ಗಳಿಂದ ದೂರವಾಗಲಿಲ್ಲ. ನನಗೆ ಎಲ್ಲೆಲ್ಲಿಯೂ ಆದರ, ಸಭೆಗಳಿಗೆಲ್ಲ ನಾನೇ ಅಧ್ಯಕ್ಷನಾಗುತ್ತಿದ್ದೆ. ನನ್ನ ಖಾದಿಯ ಉಡುಪೇ ನನಗೆ ಅತಿ ಗೌರವಕಾರಿಯಾಗಿತ್ತು. ಎಷ್ಟೋ ಜನರು ನನಗೆ ಋಷಿಪದವಿಯನ್ನೂ ಆಗಲೇ ದಯಪಾಲಿಸಿಬಿಟ್ಟಿದ್ದರು!

"ಹೀಗೆ ನನ್ನ ಸೌಭಾಗ್ಯರವಿ ಮೇಲೇರುತ್ತಿರುವಾಗಲೆ ಹಠಾತ್ತಾಗಿ ನನ್ನ ಅಧೋಗತಿಗೂ ಪೀಠಿಕೆಯಾಯಿತು. ಅಯ್ಯೋ ಗೆಳೆಯನೆ, ಆಗ ನನ್ನ ನಿತ್ಯಾನಿತ್ಯ ವಿವೇಕ ವಿಚಾರಜ್ಞಾನವು ಎಲ್ಲಿಗೆ ಓಡಿತ್ತೋ ಏನೋ! ನಾನು ಆರಿಸಲು ಹೋದ ಬೆಂಕಿಯೇ ನನ್ನನ್ನು ದಹಿಸುವಂತಾಯಿತು. ನಮ್ಮೂರಿನಲ್ಲಿ ವರ್ಷಕ್ಕೊಂದು ಸಾರಿ ಒಂದು ಜಾತ್ರೆ ನಡೆಯುತ್ತದೆ. ಆಗ ಪಾದ್ರಿಗಳ ಉಪದೇಶಾವಳಿಯಲ್ಲ, ಉಪದೇಶದ ಹಾವಳಿ ಮಿತಿಮೀರು ವುದು. ನಾನೂ ಒಬ್ಬ ಪಾದ್ರಿಗೆ ಎದುರಾಗಿಯೇ ನಿಂತು ಧರ್ಮಶಾಸ್ತ್ರ, ವೇದಾಂತ, ಭಕ್ತಿ ಮುಂತಾದುವುಗಳನ್ನು ಕುರಿತು ಉಪದೇಶಮಾಡಲಾ ರಂಭಿಸಿದೆ. ಹೀಗೆ ಮೊದಲನೆ ದಿನ ಕಳೆಯಿತು. ಪುನಃ ಎರಡನೆಯ ದಿನವೂ ಬೋಧಿಸಲು ಹೋದೆ. ಆ ದಿವಸ ಆ ಪಾದ್ರಿ ಮಾಯೆಯನ್ನು ಕರೆತರು ವಂತೆ, ತನ್ನ ಜತೆಯಲ್ಲಿ ಹದಿನಾರು ವರ್ಷದ ತನ್ನ ಮಗಳನ್ನು ಕರೆದು ಕೊಂಡು ಬಂದಿದ್ದನು. ಉಪದೇಶ ಜಯಿಸದವರನ್ನು ಸೌಂದರ್ಯ ಜಯಿ ಸುವುದೆಂಬ ತತ್ವವನ್ನು ಪಾದ್ರಿ ಚೆನ್ನಾಗಿ ಅರಿತಿದ್ದ. ಆ ದಿವಸವೂ ಉಪದೇಶಮಾಡಿದೆ. ಆದರೆ ಮನಸ್ಸೆಲ್ಲಾ ಪಾದ್ರಿಯ ಮಗಳ ಮೇಲಿತ್ತು.

"ಪ್ರಿಯ ಗೆಳೆಯ, ಮುಂದೆ ನಡೆದುದನ್ನು ಸಂಕ್ಷೇಪವಾಗಿ ಹೇಳಿ ಬಿಡುತ್ತೇನೆ. ಸದಾ ಬ್ರಹ್ಮಚಾರಿಯಾಗಬೇಕು ಎಂದಿದ್ದ ನಾನು ಪಾದ್ರಿಯ ಮಗಳಿಗೆ ಮೋಹಿತನಾದೆ. ನಾನು ಕಂಡೂ ಕಂಡೂ ಬಿದ್ದ ಬಾವಿಯ ಆಳಕ್ಕೆ ಪಾರವಿದೆಯೇ, ಚಂದು? ಅವಳಿಗಾಗಿ ಎಷ್ಟೋ ಹಣವನ್ನೂ ಖರ್ಚುಮಾಡಿದೆ. ಆ ಪಾದ್ರಿ ನಾನು ಕ್ರೈಸ್ತನಾದರೆ ಮಗಳನ್ನು ಕೊಡು ವುದಾಗಿ ಹೇಳಿದನು. ನನ್ನನ್ನು ವಂಚಿಸಿ ಧನಸಂಪಾದನೆ ಮಾಡಿದ,

ನನ್ನ ಆಸ್ತಿಯೆಲ್ಲ ಕೆಲವು ವರ್ಷಗಳಲ್ಲಿಯೇ ಪರವಶವಾಯಿತು. ಕಂಗೆಟ್ಟು ಕ್ರೈಸ್ತನಾಗಲು ಒಪ್ಪಿದೆ. ನನ್ನ ಹಿಂದಿನ ಪವಿತ್ರ ನಾಮವು ಅಳಿಸಲ್ಪಟ್ಟಿತು. ನಾನು "ಜಾರ್ಜ ವಿಲಿಯಂ" ಆದೆ. ಗೆಳೆಯ, ಅದನ್ನು ಯೋಚಿಸಿಕೊಂಡರೆ ಈಗಲೂ ನನ್ನ ಮೈ ನಡುಗುತ್ತದೆ. ಅಂತೂ ನಾನು ಕ್ರೈಸ್ತನಾದೆ! ಹಿಂದಿನ ನನ್ನ ಪ್ರಶಂಸಕರೆಲ್ಲರೂ ದೂರವಾದರು. ಸ್ನೇಹಿತರೆಲ್ಲರೂ ಕೈಬಿಟ್ಟರು. ಅನುಯಾಯಿಗಳು ಅಲ್ಲಗಳೆದರು. ಕೃತ್ರಿಮಜೀವಿ ಎಂದು ಎಲ್ಲರೂ ತಿರಸ್ಕರಿಸಿಬಿಟ್ಟರು. ಹಣ ಕಳೆದುಕೊಂಡೆ; ಆಸ್ತಿ ಕಳೆದುಕೊಂಡೆ; ಕೀರ್ತಿ ಕಳೆದುಕೊಂಡೆ; ಗೆಳೆಯರು, ಹಿತಚಿಂತಕರನ್ನೆಲ್ಲ ಕಳೆದುಕೊಂಡೆ; ಪಾತಾಳಕ್ಕೆ ಇಳಿದೆ; ಎಲ್ಲಾ ಪಾದ್ರಿಯ ಮಗಳಿಗಾಗಿ! ಇನ್ನೇನು ದೇವರು ಕೈಬಿಟ್ಟಮೇಲೆ ಸೈತಾನನೇ ಗತಿ ಎಂಬಂತೆ ಪಾದ್ರಿಯನ್ನೇ ಆಶ್ರಯಿಸಿದೆ.

"ನನ್ನಲ್ಲಿ ಹಣವಿರುವವರೆಗೂ ಪಾದ್ರಿ ನನ್ನನ್ನು ಬಹಳವಾಗಿ ಗೌರವಿಸುತ್ತಿದ್ದನು; ಪಾದ್ರಿಯ ಮಗಳೂ ಪ್ರೀತಿಸುತ್ತಿದ್ದಳು. ನಾನು ಬಡವನಾಗಿ ಗತಿವಿಹೀನನಾಗಲು ಅವರೂ ನನ್ನನ್ನು ತಿರಸ್ಕರಿಸತೊಡಗಿದರು. ಗೆಳೆಯ, ಆ ಕಷ್ಟ, ನಿಷ್ಠುರ, ನಿಂದೆ, ತಿರಸ್ಕಾರ ಇವುಗಳನ್ನು ಅನುಭವಿಸಿದ ಪರುಟವಣೆ ನಿನಗೇಕೆ?

"ಕಡೆಗೂ ಪಾದ್ರಿಯ ಮಗಳು ಕಾಸಿಲ್ಲದ ನನ್ನನ್ನು ಮದುವೆಯಾಗುವುದಿಲ್ಲ ಎಂದಳು. ನನ್ನ ಎದೆಯೊಡೆಯಿತು. ಯಾವುದಕ್ಕೋಸುಗ ನಾನು ಸಕಲ ಸೌಭಾಗ್ಯವನ್ನೂ ತ್ಯಜಿಸಿ ಪಾತಾಳಕ್ಕೆ ಧುಮುಕಿದೆನೋ ಆ ವಸ್ತುವೇ ನನಗೆ ಲಭಿಸದೆ ಹೋಯಿತು. (ಲಭಿಸದಿದ್ದುದೂ ಒಳ್ಳೆಯದಾಯಿತು!) ಅವಳು ತನ್ನ ಬಲೆಗೆ ಬಿದ್ದ ಇನ್ನಾವನೋ ನಿರ್ಭಾಗ್ಯನನ್ನು ಕಟ್ಟಿಕೊಂಡು ಓಡಿಹೋದಳು. ನಾನು ನೈರಾಶ್ಯ ಪಶ್ಚಾತ್ತಾಪಗಳ ದಾವಾಗ್ನಿಯಲ್ಲಿ ಬೆಂದು ಬೂದಿಯಾದೆ. ನನಗಿನ್ನು ಶುಭವಾಗುತ್ತದೆ, ನಾನು ಉತ್ತಮಸ್ಥಿತಿಗೇರುತ್ತೇನೆ ಎಂಬ ಆಶಿಯಾಸೆಗಳನ್ನೆಲ್ಲಾ ತೊರೆದೆ. ನನಗಿನ್ನು ನಾಶವೇ ಉತ್ತಮಗತಿಯೆಂದು ತಿಳಿದೆ. ಮಾನಮರ್ಯಾದೆಗಳನ್ನೂ ತೊರೆದೆ. ದುಃಖಶಮನಕ್ಕಾಗಿ ಸಾರಾಯಿ ಅಫೀಮು ಇವುಗಳನ್ನು ಸೇವಿಸಲಾರಂಭಿಸಿದೆ. ಕ್ರಮೇಣ ನಾನಿಳಿದಿದ್ದ ಪಾತಾಳವು ಘೋರ ನರಕವಾಯಿತು! ನನ್ನ ಜೀವನದ ನಾವೆ ಬಂದರನ್ನು ಸೇರು

ವುದರೊಳಗಾಗಿ ಪಾದ್ರಿಯ ಮಗಳೆಂಬ ಮಾರಿಬಂಡೆಗೆ ಬಡಿದು ಪುಡಿಪುಡಿ ಯಾಯಿತು. ನಾನು ಕಡಲಪಾಲಾದೆ. ಇನ್ನೆಂದಿಗೂ ತೀರವನ್ನು ಸೇರ ಲಾರೆ: ಏಕೆಂದರೆ ನಾನಿರುವುದು ನಡುಗಡಲಿನಲ್ಲಿ! ಅಲ್ಲಿಂದ ತೀರದ ಕ್ಷಣಿಕ ದರ್ಶನವನ್ನು ಕೂಡ ಕನಸಿನಲ್ಲಿಯೂ ಹಾರೈಸೆ. ಹೋಗಲಿ, ಪ್ರಿಯ ಗೆಳೆಯ, ಆದುದೆಲ್ಲಾ ಆಗಿಹೋಯಿತು. ಇನ್ನು ನನಗೆ ದಡವನ್ನು ಸೇರಬೇಕೆಂಬ ಇಚ್ಛೆಯೂ ಇಲ್ಲ. ಒಡೆದ ಹಡಗಿಗೆ ದಡವೇನು ಕಡಲೇನು? ನನಗೀಗ ಹಾಳಿನ ದುಮ್ಮಾನವೇ ಬಾಳಿನ ಸುಮ್ಮಾನಕ್ಕಿಂತಲೂ ಹಿತಕರ! ನನ್ನ ಭಾಗಕ್ಕೆ ಅಳಿವಿನ ಖೇದವೇ ಉಳಿವಿನ ಮೋದಕ್ಕಿಂತಲೂ ಅತಿಶಯ. ತಳವಿಲ್ಲದ ಪಾತಾಳಕ್ಕೆ ಹಾರಿದ್ದೇನೆ! ಇನ್ನು ಯಾರೂ ನನ್ನನ್ನು ಎತ್ತ ಲಾರರು. ಎತ್ತುವುದೂ ಬೇಡ!

"ಗೆಳೆಯ, ಇದೇ ಈ ನಿರ್ಭಾಗ್ಯನ ಸಂಕ್ಷೇಪ ಚರಿತ್ರೆ. ನಿನ್ನ ಅಭ್ಯುದಯವನ್ನು ಕಂಡು ನನಗೆ ಪರಮಾನಂದವಾಯಿತು. ನಾನು ಪಾತಾಳದಲ್ಲಿದ್ದರೂ, ಗಗನಕ್ಕಡರುವವರನ್ನು ಕಂಡು ಆನಂದಿಸುವ ಹೃದಯ ಇನ್ನೂ ಹೋಗಿಲ್ಲ. ಇನ್ನುಮುಂದೆ ನೀನು ಎಂದೆಂದಿಗೂ ಎಲ್ಲಿಯೂ ನನ್ನನ್ನು ನೋಡಲಾರೆ. ನನ್ನ ಸುದ್ದಿಯನ್ನು ಯಾರೂ ಎಂದಿಗೂ ನಿನಗೆ ಹೇಳಲಾರರು. ಇಗೋ, ನನ್ನ ಕಡೆಯ ನಮಸ್ಕಾರ!

ಇತಿ,

ನಿನ್ನ ಅಯೋಗ್ಯ ಮಿತ್ರ,

'ಯೋಗಿ'"

ಕಾಗದ ಓದಿ ನಿಟ್ಟುಸಿರು ಬಿಟ್ಟೆ. ಅವನನ್ನು ಎತ್ತುವ ಆಸೆ ಮೂಲೆ ಸೇರಿತು. ಶೋಕ, ಕನಿಕರ, ವಿಸ್ಮಯ ಇವುಗಳಿಂದ ಹೃದಯ ಉಲ್ಲೋಲ ಕಲ್ಲೋಲವಾಯಿತು.

"ಅಯ್ಯೋ, ವಿಧಿವಿಲಾಸವೆ" ಎಂದಂದುಕೊಂಡು ಕಿಟಕಿಯಿಂದ ಹೊರಗೆ ನೋಡಿದೆ.

ಪಶ್ಚಿಮ ಗಗನದಲ್ಲಿ ಸಂಜೆಯ ಸೂರ್ಯನು ರಂಜಿಸುತ್ತ ಸಹ್ಯಾದ್ರಿ ಪರ್ವತಗಳ ಹಿಂದೆ ಇಳಿದಿಳಿದು ಅಡಗುತ್ತಿದ್ದನು. ಆತನ ಮನೋಹರ ನಾದ ವಿಶಾಲ ಬಿಂಬವು ಸ್ವಲ್ಪಸ್ವಲ್ಪವಾಗಿ ಮರೆಯಾದ ಹಾಗೆಲ್ಲ ನನ್ನ

ಗೆಳೆಯನ ಆತ್ಮವಿನಾಶದ ನೆನಪಾಗುತ್ತಿತ್ತು. ತುಸುಹೊತ್ತಿನಲ್ಲಿಯೆ ಅವನೂ ಮರೆಯಾದನು. ನಾನೂ ಮನಸ್ಸಿನ ಶಾಂತಿಗಾಗಿ ಗದ್ದೆಗಳಲ್ಲಿ ಅಡ್ಡಾಡಲು ಮಹಡಿಯಿಂದ ಇಳಿದುಹೋದೆ. ಅನಿರ್ವಚನೀಯವಾದ ವ್ಯಾಕುಲತೆಯೊಂದು ಮಾತ್ರ ಹೃದಯವನ್ನು ಪೀಡಿಸುತ್ತಲೆ ಇತ್ತು.



# ಈಶ್ವರನೂ ನಕ್ಕಿರಬೇಕು

ಆ ದಿನ ಭಾನುವಾರ. ನಾಗರಾಜನ ಆಫೀಸಿಗೆ ರಜ. ಏನಾದರೂ ವೃತ್ತಪತ್ರಿಕೆಗಳನ್ನು ಓದಬೇಕೆಂದು ಪ್ರಾತಃಕಾಲ ಮುಂಚಿತವಾಗಿಯೆ ಎದ್ದು 'ಸುಖನಿವಾಸ' ದಲ್ಲಿ ದೋಸೆ ಕಾಫಿ ತೆಗೆದುಕೊಂಡು ಸಯ್ಯಾಜಿರಾವ್ ರೋಡಿನಲ್ಲಿರುವ ಪಬ್ಲಿಕ್ ಲೈಬ್ರರಿಗೆ ಹೋಗುತ್ತಿದ್ದನು. ಕೃಷ್ಣರಾಜೇಂದ್ರ ಆಸ್ಪತ್ರೆಯ ಮುಂಭಾಗಕ್ಕೆ ಬರಲು ಒಂದು ಕಾಗೆ ಬಲದಿಂದ ಎಡಕ್ಕೆಹಾದು ಹೋಯಿತು. ಅವನಿಗೆ ಶಕುನಗಳಲ್ಲಿ ಅಷ್ಟೇನೂ ಪರಿಚಯವಿರಲಿಲ್ಲ. ಅಲ್ಲದೆ ಹೆಚ್ಚು ನಂಬುಗೆಯೂ ಇರಲಿಲ್ಲ. ಕಾಗೆ ಯಾವ ಕಡೆಯಿಂದ ಯಾವ ಕಡೆಗೆ ಹೋದರೆ ಶುಭ, ಯಾವ ಕಡೆಯಿಂದ ಯಾವ ಕಡೆಗೆ ಹೋದರೆ ಅಶುಭ ಎಂಬುದು ಎಷ್ಟು ಪ್ರಯತ್ನಿಸಿದರೂ ಅವನ ಬುದ್ಧಿಗೆ ಹೊಳೆಯಲಿಲ್ಲ. ಆದ್ದರಿಂದ ನಡೆದ ಸಂಗತಿ ಶುಭವೆಂದೇ ದೃಢಮಾಡಿಕೊಂಡು ಮುಂದುವರಿದನು. ಅವನು ಹೋಗುತ್ತಿದ್ದುದು ಯಾವ ಮಹಾ ಕಾರ್ಯಾರ್ಥವಾಗಿಯೂ ಆಗಿರಲಿಲ್ಲ. ಸುಮ್ಮನೆ ವೃತ್ತಪತ್ರಿಕೆಗಳನ್ನು ಓದುವುದಷ್ಟೇ. ಆದರೆ ಶುಭಾಶುಭಗಳನ್ನು ನಿರ್ಣಯಿಸುವುದು ಮನುಷ್ಯರಲ್ಲಿ ಸಾಮಾನ್ಯ ಗುಣವಷ್ಟೆ? ಅದರಂತೆಯೇ ನಾಗರಾಜನೂ ಭಾವಿಸಿ ಲೈಬ್ರರಿಗೆ ಹೋದನು.

ಅಲ್ಲಿ 'ಹಿಂದೂ' ಪತ್ರಿಕೆಯನ್ನು ಓದುತ್ತಾ, ಸೈಮನ್ ಸಮಿತಿಯ ವಿಚಾರ, ದಕ್ಷಿಣ ಆಫ್ರಿಕಾದಲ್ಲಿ ಭಾರತೀಯರ ಸ್ಥಿತಿಗತಿಗಳು, ಶಾಸ್ತ್ರಿಗಳ ಉಪನ್ಯಾಸ—ಇವೇ ಮೊದಲಾದವುಗಳನ್ನು ಮುಗಿಸಿ, ಇನ್ನೇನು ಅದನ್ನು

ಬಿಟ್ಟು ‘ ಸ್ವರಾಜ್ಯ ’ ಪತ್ರಿಕೆಗೆ ಹೋಗಬೇಕು, ಅಷ್ಟರಲ್ಲಿ ಅವನ ದೃಷ್ಟಿ " ಒಬ್ಬ ವರನು ಬೇಕಾಗಿದೆ " ಎಂದು ದಪ್ಪ ಅಕ್ಷರದಲ್ಲಿ ಬರೆದಿದ್ದ ಒಂದು ಪ್ರಕಟಣೆಯ ಮೇಲೆ ಬಿತ್ತು. ಅದನ್ನೊ ಓದಿದನು; ಮತ್ತೂ ಓದಿದನು; ಇನ್ನೂ ಓದಿದನು. ಎಷ್ಟು ಓದಿದರೂ ಅವನಿಗೆ ತೃಪ್ತಿಯೇ ಆದಂತೆ ಕಾಣಲಿಲ್ಲ. ಅದರಲ್ಲಿ ಸತ್ಕುಲಪ್ರಸೂತೆಯಾದ ಒಬ್ಬ ಹನ್ನೆರಡು ವರುಷದ ಬ್ರಾಹ್ಮಣ ಕನ್ಯೆಗೆ ತಿಂಗಳಿಗೆ ೫೦ ರೂಪಾಯಿಗೆ ಕಡಮೆಯಿಲ್ಲದೆ ಸಂಪಾದನೆ ಮಾಡುವ ವರನು ಬೇಕಾಗಿದೆ ಎಂದು ಬರೆದಿತ್ತು. ಕನ್ಯೆಯ ಊರು ಧಾರವಾಡ. ಆಕೆಯ ದಾತಾರನಾದ ಶ್ಯಾಮರಾಯರ ವಿಳಾಸವು ಅದರಲ್ಲಿತ್ತು. ನಾಗರಾಜನ ಎದೆ ಹಿಗ್ಗಿತು. ಬೇಗಬೇಗನೆ ಶ್ಯಾಮರಾಯರ ವಿಳಾಸವನ್ನು ಡೈರಿಯಲ್ಲಿ ಬರೆದುಕೊಂಡನು. ಬರೆದುಕೊಳ್ಳುವಾಗ ಯಾರಾದರೂ ನೋಡುವರೋ ಏನೋ ಎಂದು ಅತ್ತ ಇತ್ತ ನೋಡುತ್ತಿದ್ದನು.

ಅಷ್ಟುಹೊತ್ತಿಗೆ ಲೈಬ್ರರಿಗೆ ಬಂದ ಅವನ ಸ್ನೇಹಿತ ಕೃಷ್ಣರಾಯನು "ಅದೇನು ಬರೆದುಕೊಳ್ಳುತ್ತಿದ್ದೀಯೋ ನಾಗರಾಜ?" ಎಂದು ಕೇಳುತ್ತಾ ಹತ್ತಿರ ಬಂದನು. ನಾಗರಾಜನು ಬೇಗಬೇಗ ಕಾಗದವನ್ನು ಮಡಿಸಿ ಜೇಬಿಗೆ ಹಾಕಿಕೊಂಡು "ಏನೂ ಇಲ್ಲ ಕಣೋ. ಆಮೇಲೆ ಹೇಳ್ತೀನಿ" ಎಂದನು.

ನಾಗರಾಜನು ಭಿಕ್ಷಾನ್ನದಿಂದ ಹೊಟ್ಟೆ ಹೊರೆದುಕೊಂಡು ವಿದ್ಯಾಭ್ಯಾಸ ಮಾಡಿ ಈಗ ರೆವಿನ್ಯೂ ಇಲಾಖೆಯಲ್ಲಿ ಅರವತ್ತು ರೂಪಾಯಿ ಸಂಬಳದ ಗುಮಾಸ್ತೆಯ ಕೆಲಸದಲ್ಲಿ ಇರುವ ಮೂವತ್ತು ವರುಷದ ತರುಣನು. ಅವನಿಗೆ ಇನ್ನೂ ಮದುವೆಯಾಗಿರಲಿಲ್ಲ. ನೋಡುವುದಕ್ಕೆ ಸ್ವಲ್ಪ ಕುರೂಪಿ. ಅದರ ಜೊತೆಗೆ ಬಲಗಡೆಯ ಕಿವಿಯೇ ಇರಲಿಲ್ಲ. ಆದ್ದರಿಂದ ಅವನಿಗೆ ಯಾರೂ ಹೆಣ್ಣು ಕೊಡಲಿಲ್ಲ. ಪಾಪ, ಎಷ್ಟು ದಿನ ತಾನೇ ಏಕಾಂಗಿಯಾಗಿದ್ದಾನು ? ಹುಡುಗನಾಗಿರುವಾಗಂತೂ ಭಿಕ್ಷಾನ್ನ; ಆಮೇಲೆ ಕೂಡ ಜೀವಮಾನವನ್ನೆಲ್ಲಾ ಹೋಟೆಲಿನ ಹಾಳನ್ನ ತಿಂದು ಬದುಕುವುದಾದರೂ ಹೇಗೆ? ಇದಕ್ಕಾಗಿ ಅವನು ಎಷ್ಟೋಸಾರಿ ಚಿಂತಿಸಿ ವ್ಯಥೆಪಟ್ಟಿದ್ದನು. ಆದ್ದರಿಂದಲೇ ಪತ್ರಿಕೆಯಲ್ಲಿ ಪ್ರಕಟನೆಯನ್ನು ನೋಡಿ

ದಾಗ ಅವನಿಗೆ ನೆಚ್ಚುಮೂಡಿ ಎದೆಯುರಳಿದ್ದು !

ಆ ದಿನ ಅವನು ಇನ್ನಾವ ಪತ್ರಿಕೆಯನ್ನೂ ಓದದೆ ಹಿಂತಿರುಗಿ ತನ್ನ ರೂಮಿಗೆ ಬಂದುಬಿಟ್ಟನು. ಕೊಠಡಿಯ ಬಾಗಿಲನ್ನು ಹಾಕಿಕೊಂಡು ಮುಂದೆ ಮಾಡಬೇಕಾದ ಕಾರ್ಯಾಲೋಚನೆ ಮಾಡತೊಡಗಿದನು. ಧಾರ ವಾಡ ದೂರದ ಊರು. ಅಲ್ಲಿ ಯಾರಿಗೂ ತನ್ನ ವಿಚಾರ ಗೊತ್ತಿಲ್ಲ. ತಾನು ಕಿವಿಹರುಕನೆಂಬ ಸಂಗತಿ ಹೆಣ್ಣಿನವರಿಗೆ ಗೊತ್ತಾದರೆ ಹೆಣ್ಣು ದೊರಕುವುದು ಸುಳ್ಳುಮಾತು. ಹೇಗಾದರೂ ಮಾಡಿ ತನ್ನ ಅವಲಕ್ಷಣ ವನ್ನು ಮರೆಮಾಚಿಕೊಂಡು ಮದುವೆಗೆ ಸನ್ನಾಹ ಮಾಡಬೇಕು. ಎಂತಿದ್ದರೂ ಹೆಣ್ಣಿನವರ ಅಪೇಕ್ಷೆಯಂತೆ ತನಗೆ ೫೦ ರೂಪಾಯಿಗಳಿಗೆ ಕಡಮೆಯಿಲ್ಲದಂತೆ ಸಂಪಾದನೆ ಇದೆ. ಮೊದಲು ಯಾರಿಗೂ ತಿಳಿಯದಂತೆ ಕಾಗದಗಳ ಮೂಲಕ ಹೆಣ್ಣಿನ ಸಾಕುತಂದೆಯಾದ ಶಾಮರಾಯರೊಡನೆ ವ್ಯವಹಾರ ನಡೆಸಿ, ಅವರ ಒಪ್ಪಿಗೆಯನ್ನು ಪಡೆಮಕೊಂಡು, ತರುವಾಯ ತನ್ನ ಸ್ನೇಹಿತರಿಗೂ ಬಂಧುಗಳಿಗೂ ವಿಷಯವನ್ನು ತಿಳಿಸಿ ವಿವಾಹ ಸಾಂಗವಾಗಿ ನೆರವೇರುವಂತೆ ಮಾಡಬೇಕು. ಇಲ್ಲವೆ ಇದ್ದರೆ ನಾಚಿಕೆ ಗೇಡಾಗುವುದು. ಏನೋ ತನ್ನ ಪ್ರಯತ್ನ ಮಾಡುವುದು; ಮುಂದೆ ದೈವಚಿತ್ತ.

ನಾಗರಾಜನು ಶ್ಯಾಮರಾಯರಿಗೆ ಒಂದು ಕಾಗದ ಬರೆದ. ಬರೆದ ಎನ್ನುವುದಕ್ಕಿಂತಲೂ ರಚಿಸಿದ ಎನ್ನುವುದೇ ಮೇಲು. ಏಕೆಂದರೆ ಕಾಗದ ಬರೆಯುವುದಕ್ಕೆ ಸುಮಾರು ಮೂರು ಗಂಟೆ ಹೊತ್ತಾಯಿತು! ಆ ಸಂಭ್ರಮದಲ್ಲಿ ಊಟವನ್ನೂ ಮರೆತುಬಿಟ್ಟನು. ಕಾಗದದಲ್ಲಿ ತನ್ನ ಸಬಂಳ ವಿದ್ಯಾಭ್ಯಾಸ ಮೊದಲಾದ ತನಗೆ ನೆರವಾಗುವ ಸಮಾಚಾರಗಳನ್ನೆಲಾ ಬರೆದನು. ವಯಸ್ಸನ್ನು ಮಾತ್ರ ಮುವ್ವತ್ತರಿಂದ ಇಪ್ಪತ್ತೈದಕ್ಕೆ ಇಳಿಸಿ ಬಿಟ್ಟನು. ಅಂತೂ ಕಾಗದಕ್ಕೆ ಮಾಡಬೇಕಾದ ಸಂಸ್ಕಾರಗಳನ್ನೆಲ್ಲ ಮಾಡಿ ದಿಗ್ದೇವತೆಗಳಿಗೆ ನಮಸ್ಕಾರ ಮಾಡಿ, ಅದನ್ನು ಟಪ್ಪಾಲುಪೆಟ್ಟಿಗೆಗೆ ಇಳಿ ಬಿಟ್ಟನು.

ಶ್ಯಾಮರಾಯರ ಉತ್ತರವನ್ನೆ ಹಾರೈಸುತ್ತಾ ಎರಡು ಮೂರು ದಿನ ಗಳನ್ನು ಕಳೆದನು. ಒಂದು ಕಡೆ ಆಶಾಭಂಗವಾಗುವುದೇನೋ ಎಂದು

ಭಯ. ಇನ್ನೊಂದು ಕಡೆ ಸಕಲವೂ ಕೈಗೂಡುವುದೆಂಬ ಸವಿಗನಸಿನ ಸಂತೋಷ. ಹೀಗೆ ದಿನದ ಮೇಲೆ ದಿನ ಕಳೆಯಿತು.

ಶ್ಯಾಮರಾಯರು ಧಾರವಾಡದ ಒಬ್ಬ ಬಡ ಕುಟುಂಬಿ. ಮದುವೆಗೆ ಬಂದ ಲಲಿತಮ್ಮನು ಅವರ ಮಗಳೂ ಅಲ್ಲ; ಹತ್ತಿರದ ಸಂಬಂಧಿಯೂ ಅಲ್ಲ ಆಕೆ ಅವರ ಹೆಂಡತಿಯ ತಂಗಿಯ ಗಂಡನ ತಮ್ಮನ ಪತ್ನಿಯ ನಾದಿನಿ. ಆಕೆಗೆ ಯಾರೂ ದಿಕ್ಕಿರಲಿಲ್ಲ. ಆದ್ದರಿಂದ ಚಿಕ್ಕಂದಿನಿಂದಲೂ ಆಕೆಯನ್ನು ಮುದ್ದಿನಿಂದ ಸಾಕಿದರು. ಹೆಸರು ಲಲಿತಮ್ಮನಾದರೂ ರೂಪ ಅಷ್ಟೇನೂ ಲಲಿತವಾಗಿರಲಿಲ್ಲ. ಅಲ್ಲದೆ ಆಕೆಯ ಎಡಗೈ ಬಹಳ ಮೋಟಾಗಿ ಡೊಂಕಾಗಿ ದೇಹಕ್ಕೊಂದು ಕೆಲಸಕ್ಕೆ ಬಾರದ ಕೊಂಬೆಯಾಗಿತ್ತು. ವರಾನ್ವೇಷಣೆಗಾಗಿ ಅವರು ಎಷ್ಟು ಬಳಲಿದರೂ ಫಲಕಾರಿಯಾಗಲಿಲ್ಲ. ಆಕೆಯನ್ನು ಮದುವೆಯಾಗಲು ಯಾವ ಯುವಕನೂ ಒಪ್ಪಲಿಲ್ಲ. ವರದಕ್ಷಿಣೆಯನ್ನು ಹೆಚ್ಚಿಸಿದ್ದರೆ ಯಾರಾದರೂ ಒಪ್ಪುತ್ತಿದ್ದರು. ಆದರೆ ಶ್ಯಾಮರಾಯರಿಗೆ ಅಷ್ಟು ಸಾಮರ್ಥ್ಯವಿರಲಿಲ್ಲ.

ನಾಗರಾಜನ ಕಾಗದ ನೋಡಿದ ಕೂಡಲೆ ಅವರಿಗೆ ಪರಮಾನಂದವಾಯಿತು. ಹೇಗಾದರೂ ಮಾಡಿ ಹುಡುಗಿಯ ಅವಲಕ್ಷಣ ಹುಡುಗನಿಗೆ ತಿಳಿಯದಂತೆ ಲಗ್ನಮಾಡಿಬಿಟ್ಟರೆ ಪುಣ್ಯಕಟ್ಟಿಕೊಂಡ ಹಾಗಾಗುತ್ತದೆ, ಎಂದು ಯೋಚಿಸಿ, ನಾಗರಾಜನಿಗೆ ಕಾಗದ ಬರೆದರು. ಆ ಕಾಗದದಲ್ಲಿ ಅವರ ಒಪ್ಪಿಗೆಯನ್ನು ಸೂಚಿಸಿ, ನಾಗರಾಜನ ಫೋಟೋವನ್ನು ಲಗ್ನ ನಿಶ್ಚಯ ಮಾಡುವುದಕ್ಕೆ ಮುಂಚೆಯೇ ಕಳುಹಿಸಬೇಕೆಂದೂ, ಹುಡುಗಿಯ ಕಡೆಯವರು ಅವನ್ನು ನೋಡಲಿಚ್ಛಿಸುವರೆಂದೂ, ನಾಗರಾಜನಂಥ ಅಳಿಯಂದಿರನ್ನು ಪಡೆಯಲು ಯಾರಿಗೆ ತಾನೆ ಇಷ್ಟವಿರುವುದಿಲ್ಲವೆಂದೂ, ಇನ್ನೂ ಮೊದಲಾದ ನಾನಾ ಉಪಚಾರದ ಮಾತುಗಳನ್ನು ಪೋಣಿಸಿದರು.

ಕಾಗದ ನಾಗರಾಜನ ಕೈ ಸೇರಿತು. ಮರುಭೂಮಿಯಲ್ಲಿ ಬಾಯಾರಿ ನೀರನ್ನು ಹುಡುಕಿ ಹುಡುಕಿ ಬೆಂದು ಬೇಗುದಿಗೊಂಡು ತಿರುಗಾಡುವ ಸಂಚಾರಿಗೆ ದೊಡ್ಡ ತಿಳಿಗೊಳವು ಕೈದೋರಿದಂತಾಯಿತು. ಅವನ ಆನಂದಕ್ಕೆ ಪಾರವೇ ಇಲ್ಲದಂತಾಯಿತು. ತನ್ನ ಸ್ನೇಹಿತರ ಮನೆ ಮನೆಮನೆಗೂ ತಿರುಗಿ ಬೆಲೆಯುಳ್ಳ ಉಡುಪುಗಳನ್ನು ಶೇಖರಿಸಿ ನೀಟಾಗಿ

ಪೋಷಾಕು ಹಾಕಿಕೊಂಡನು. ಬಹಳ ಎಚ್ಚರಿಕೆಯಿಂದ ತನ್ನ ಹರುಕು ಕಿವಿ ಕಾಣವಂತೆ ರುಮಾಲನ್ನು ಸುತ್ತಿಕೊಂಡು ಮೈಸೂರಿನಲ್ಲಿ ಪ್ರಸಿದ್ಧರಾದ ತಸ್ವೀರುಗಾರರೊಬ್ಬರ ಕಾರ್ಯಾಲಯಕ್ಕೆ ಹೋಗಿ ಫೋಟೋ ತೆಗೆಸಿಕೊಂಡನು. ಫೋಟೋವನ್ನು ಮರುದಿನವೇ ಕೊಡುವಂತೆ ಅವರಿಗೆ ಸಾರಿ ಸಾರಿ ಹೇಳಿ, ಅಲ್ಲಿಂದ ಹೊರಟು ಸ್ವಲ್ಪದೂರ ಬಂದಮೇಲೆ ಪುನಃ ಹಿಂದಕ್ಕೆ ಹೋದನು.

ತಸ್ವೀರುಗಾರನು "ಇನ್ನೇನು ? ಮತ್ತೇಕೆ ಬಂದಿರಿ ?" ಎಂದನು.

"ಏನೂ ಇಲ್ಲ, ಒಂದು ಮಾತು ಹೇಳಬೇಕಾಗಿತ್ತು, ಮರೆತುಬಿಟ್ಟೆ."

"ಏನು ?"

"ಇನ್ನೇನೂ ಇಲ್ಲ. ಚಿತ್ರದಲ್ಲಿ ಮುಖದ ಮೇಲೆ ಇರುವ ಕಲೆಗಳೆಲ್ಲಾ ಬಿದ್ದರೆ ವಿಕಾರವಾಗುವುದಿಲ್ಲವೆ ?"

"ಅದಕ್ಕೇನು ಮಾಡೋದು ಸ್ವಾಮಿ ? ಮುಖ ಇದ್ದಹಾಗೆ ಚಿತ್ರ ಬೀಳುತ್ತೆ. ಕ್ಯಾಮರಾದ ತಪ್ಪೇನು ಅದರಲ್ಲಿ ?"

"ಹಾಗಲ್ಲ; ನೀವು ಸ್ವಲ್ಪ 'ಟಚ್' ಮಾಡಿಬಿಡಿ."

"ಅದಕ್ಕೇನು ? ಬೇಕಾದಹಾಗೆ ಮಾಡುತ್ತೇವೆ !"

ಮರುದಿನವೇ ನಾಗರಾಜನು ತನ್ನ ಫೋಟೋ ತೆಗೆದುಕೊಂಡು ಬರಲು 'ಸ್ಟುಡಿಯೋ' ಕ್ಕೆ ಹೋದನು. ತಸ್ವೀರುಗಾರನು ತಸ್ವೀರಿನ ಮೂರು ಪ್ರತಿಗಳನ್ನು ನಾಗರಾಜನ ಕೈಲಿಟ್ಟನು.

ನಾಗರಾಜನು "ಸ್ವಾಮಿ, ಫೋಟೋ ಬದಲಾವಣೆಯಾಗಿದೆ ಅಂತ ಕಾಣುತ್ತದೆ" ಎಂದನು.

"ಇಲ್ಲ ಸ್ವಾಮಿ ; ಬದಲಾವಣೆಯಾಗಿಲ್ಲ. 'ಟಚ್' ಮಾಡಿ ಎಂದು ನೀವೇ ಹೇಳಿದ್ದಿರಲ್ಲ. ಅದಕ್ಕೆ ಸ್ವಲ್ಪ ಚೆನ್ನಾಗಿಯೇ 'ಟಚ್' ಮಾಡಿದ್ದೇನೆ !" ಅಂತೂ ಫೋಟೋಗೆ 'ಗೋಲ್ಡ್‌ಟಚ್' ಆಗಿಬಿಟ್ಟಿತ್ತು.

"ಸರಿ ಗೊತ್ತಾಯ್ತು" ಎಂದು ಹೇಳಿ ನಾಗರಾಜನು ಹೊರಟನು.

ತನ್ನ ರೂಮಿಗೆ ಹೋದಮೇಲೆ ತಸ್ವೀರನ್ನು ಮತ್ತೆಮತ್ತೆ ನೋಡುತ್ತಾ 'ನಾನು ಇಷ್ಟು ಸುಂದರಪುರುಷನೆ ?' ಎಂದು ಹಿಗ್ಗಿದನು. ಕನ್ನಡಿಯಲ್ಲಿ ತನ್ನ ಮುಖವನ್ನು ನೋಡಿ, ಅದನ್ನು ಫೋಟೋದೊಡನೆ ಹೋಲಿಸಿದನು.

ಒಂದಕ್ಕೊಂದು ಸಂಬಂಧವೇ ಇರಲಿಲ್ಲ. ಕನ್ನಡಿಯೇ ಮೋಸಗಾರನೆಂದು ಅವನ್ನು ಬಯ್ದು, ತಪ್ಪೀರು ಪೆಟ್ಟಿಗೆಯನ್ನು ಭಕ್ತಿಯಿಂದ ಸ್ತುತಿಸಿ, ತಪ್ಪೀರನ್ನು ಕಾಗದದೊಡನೆ ಶ್ಯಾಮರಾಯರಿಗೆ ಕಳುಹಿಸಿದನು. ಪತ್ರದಲ್ಲಿ ಹುಡುಗಿಯ ಚಿತ್ರವನ್ನು ನಾನು ನೋಡಬೇಕು. ಅವಳ ಫೋಟೋ ಕಳುಹಿಸಿಕೊಡಿ ಎಂದು 'ಮ.ಮಾ.' ಬರೆದನು. ('ಮ.ಮಾ.' ಎಂದರೆ 'ಮರೆತ ಮಾತು.'

ನಾಗರಾಜನಂತೆಯೆ ಶ್ಯಾಮರಾಯರೂ ಕನ್ಯೆಗೆ ನಾನಾವಿಧವಾದ ಅಲಂಕಾರಗಳನ್ನು ತೊಡಿಸಿ, ಪೀತಾಂಬರವನ್ನು ಉಡಿಸಿ, ಆಕೆಯ ಕೈಯ ಕೊರತೆ ಕಾಣದಂತೆ ಅದನ್ನು ಸೀರೆಯ ಸೆರಗಿನಿಂದ ಮುಚ್ಚಿಸಿ, ಫೋಟೋ ತೆಗೆಸಿ 'ಟಚ್' ಮಾಡಿಸಿಯೇ ಕಳುಹಿಸಿದರು.

ನಾಗರಾಜನು ಲಲಿತಮ್ಮನ ಚಿತ್ರವನ್ನು ನೋಡಿ ಮೈಮರೆತುಬಿಟ್ಟನು. ಅವನು ಕೆಲವು ಕನ್ನಡ ಗ್ರಂಥಗಳಲ್ಲಿ ಸ್ತ್ರೀವರ್ಣನೆಯನ್ನು ಓದಿದ್ದನು. ಆದರೆ ಯಾವ ವರ್ಣನೆಯೂ ಅವನಿಗೆ ಸಮರ್ಪಕವಾಗಿ ಕಾಣಲಿಲ್ಲ. ಅವನ ಕಣ್ಣಿಗೆ ಲಲಿತಮ್ಮನು ಸಾಕ್ಷಾತ್ ರತಿಯಂತೆ ರಂಜಿಸಿದಳು. ಅವನು ಆ ಚಿತ್ರವನ್ನು ಮುದ್ದಿಸಿ, ರವಿಯೂ ಕಾಣದ ಎಷ್ಟೋ ವಿಧವಾದ ಸರಸ ರಸಿಕತೆಯನ್ನು ಪ್ರದರ್ಶಿಸಿ, ತನ್ನ ಭಾಗ್ಯಲಕ್ಷ್ಮಿಯನ್ನು ಕೊಂಡಾಡಿದನು. ಲಲಿತಮ್ಮನೂ ನಾಗರಾಜನ ಚಿತ್ರವನ್ನು ಕಂಡು ಮೋಹದಿಂದ ಮೈ ಮರೆತಳು. ಅವನ ಜರಿಯ ಪೇಟ, ಬೂಟ್ಸ್, ಷರಾಯಿ, ನೆಕ್‌ಟೈ ಮೊದಲಾದುವುಗಳನ್ನು ನೋಡಿ, ಮನ್ಮಥನೆಂದೇ ಭಾವಿಸಿ, ತನ್ನನ್ನು ಕೈಹಿಡಿಯಲೊಪ್ಪಿದ ಮಹಾತ್ಮನಿಗೆ ಭಕ್ತಿಯಿಂದ ನಮಸ್ಕರಿಸಿದಳು.

ಮದುವೆ ಧಾರವಾಡದಲ್ಲಿಯೆ ಜರುಗಿತು. ಗಂಡಿನ ಕಡೆಯವರಿಗೆ ಏನು ಸಮಾಧಾನ ಎಂದರೆ: ಪಾಪ! ಹುಡುಗನಿಗೆ ಕಿವಿ ಹರುಕನೆಂದು ಯಾರೂ ಹೆಣ್ಣು ಕೊಡುತ್ತಿರಲಿಲ್ಲ; ಈಗ ನಿಜಸ್ಥಿತಿಯನ್ನು ಹೊರಪಡಿಸಿ ಅವನ ಆಸೆಗೆ ಮಣ್ಣುಹಾಕುವುದು ದೊಡ್ಡ ಪಾಪ; ಕಲ್ಯಾಣಕ್ಕಾಗಿ ಮೋಸಪಡಿಸಿದರೂ ಪಾಪವಿಲ್ಲ ಎಂದು. ಹೆಣ್ಣಿನವರಿಗೂ ಹಾಗೆಯೆ. ಅಂತು ಎಲ್ಲರೂ ಗೊತ್ತಿದ್ದರೂ ಗೊತ್ತಿಲ್ಲದವರಂತೆ ಸುಮ್ಮನಾದರು.

ನಾಗರಾಜನೂ ಲಲಿತಮ್ಮನೂ ಒಬ್ಬರನ್ನೊಬ್ಬರು ನೋಡಿದಾಗ ಇಬ್ಬರೂ ಸ್ವಲ್ಪ ಚಕಿತರಾದರು. ಆದರೆ ಆಗಲೇ ಇಬ್ಬರ ಹೃದಯದಲ್ಲಿಯೂ ಪರಸ್ಪರ ಅನುರಾಗವು ಅಂಕುರಿಸಿದ್ದರಿಂದ ಇಬ್ಬರಿಗೂ ಪರಸ್ಪರ ಸೌಂದರ್ಯವು ತೋರಿತೇ ಹೊರತು ಕುರೂಪ ಕಾಣಲೇ ಇಲ್ಲ. ಕಣ್ಣಿಗೆ ಕೂಡ ಕನಿಕರ ವಿಲ್ಲವೆ? ಅಂತೂ ತನ್ನ ಹೆಂಡತಿಗೆ ಕೈಯಿಲ್ಲ ಎಂಬ ವಿಚಾರವೂ, ತನ್ನ ಗಂಡನಿಗೆ ಕಿವಿಯಿಲ್ಲ ಎಂಬುದೂ ಇಬ್ಬರಿಗೆ ಗೊತ್ತಾಗಲಿಲ್ಲ. ಪ್ರೇಮಾನು ರಾಗವು ಬಲವಾಗಿ ಅಂಕುರಿಸುವುದಕ್ಕೆ ಮುಂಚೆ ಸೌಂದರ್ಯ, ಸೌಭಾಗ್ಯ, ಸುಖ ಇವುಗಳ ಮೇಲೆ ದೃಷ್ಟಿ. ಅನುರಾಗ ಅಂಕುರಿಸಿತೆಂದರೆ ಕೋಡಗ ಕೂಡ ಕಣ್ಣಿನ ಮುದ್ದಾಗುವುದೇನೂ ಆಶ್ಚರ್ಯವಲ್ಲ.

ಮದುವೆ ಮುಗಿದುಹೋಯಿತು. ನಾಗರಾಜನು ತಾನು ಧನ್ಯ ನಾದೆನೆಂದು ಹರ್ಷಚಿತ್ತನಾಗಿ ಮೈಸೂರಿಗೆ ಬಂದನು ಲಲಿತಮ್ಮನೂ ತನ್ನ ಪುಣ್ಯಕ್ಕೆ ಎಣೆಯಿಲ್ಲವೆಂದು ತಿಳಿದು ಹೆಮ್ಮೆಯಿಂದ ಹಿಗ್ಗಿಹೋದಳು. ಗಂಡು ಮತ್ತು ಹೆಣ್ಣಿನ ಕಡೆಯವರಿಗೆ ಒಂದು ಅಸಾಧ್ಯ ಸಾಧನೆಯಾದಂ ತಾಗಿ ತಂತಮ್ಮ ಮನೆಗಳಿಗೆ ಹೋದರು.

ನಾಗರಾಜನು ಮೈಸೂರಿಗೆ ಬಂದವನು ಕೃಷ್ಣಮೂರ್ತಿಪುರದಲ್ಲಿ ಒಂದು ಸಣ್ಣ ಮನೆಯನ್ನು ಬಾಡಿಗೆಗೆ ತೆಗೆದುಕೊಂಡು, ಸಂಸಾರಕ್ಕೆ ಬೇಕಾದ ಪದಾರ್ಥಗಳನ್ನೆಲ್ಲಾ ಒದಗಿಸಿದನು. ಅಂದಿನಿಂದ ಅವನಿಗೆ ಪ್ರಪಂಚದಲ್ಲಿ ಕಾಂತಿ ಹೆಚ್ಚಿದಂತಾಯಿತು. ಸೂರ್ಯನೂ ಚಂದ್ರನೂ ಇಮ್ಮಡಿಯಾಗಿ ಪ್ರಕಾಶಿಸತೊಡಗಿದರು. ಹಕ್ಕಿಗಳ ಗಾನ ಮೊದಲಿ ಗಿಂತಲೂ ಮಧುರವಾಗಿ ಪರಿಣಮಿಸಿತು. ಪ್ರಪಂಚದ ಜೀವನವು ನಿಜ ವಾಗಿಯೂ ಅಷ್ಟೇನೂ ವ್ಯರ್ಥವಲ್ಲ ಎಂದು ಯೋಚಿಸಿದನು. ತನ್ನ ಫೋಟೋವನ್ನು ಲಲಿತಮ್ಮನ ಫೋಟೋವನ್ನೂ ಜೊತೆಯಾಗಿ ಅಂಟಿಸಿ 'ಕಟ್ಟುಹಾಕಿಸಿ, ಮಲಗುವ ಮನೆಯ ಗೋಡೆಯ ಮೇಲೆ ಅದನ್ನು ಸ್ಥಾಪಿಸಿದನು.

ಕೆಲವು ದಿನಗಳ ಮೇಲೆ ಲಲಿತಮ್ಮನನ್ನು ಮೈಸೂರಿಗೆ ಕರೆದು ಕೊಂಡು ಬಂದನು. ಆಗಲೂ ಕೂಡ ಲಲಿತಮ್ಮನ ಜೊತೆಯಲ್ಲಿ ಆಕೆಯ ಬಂಧುಗಳು ಇದ್ದುದರಿಂದ ಇಬ್ಬರಿಗೂ ಪರಸ್ಪರ ಅವಲಕ್ಷಣಗಳು

ಗೊತ್ತಾಗಲಿಲ್ಲ.

ಆ ದಿನ ಹುಣ್ಣಿಮೆ. ಅದರಲ್ಲಿಯೂ ವಸಂತಮಾಸ! ಹೀಗಿರಲು ನವನೀರನೀರೆಯರ ಸಂತಸಕ್ಕೆ ಮೇರೆಯುಂಟೆ? ನಾಗರಾಜನೂ ಲಲಿತಮ್ಮನೂ ಮಲಗುವ ಮನೆಯಲ್ಲಿ ಇಬ್ಬರೇ ಕುಳಿತಿದ್ದಾರೆ. ಜನವಿಹೀನವಾದ ನೀರವ ರಾತ್ರಿ. ಹಾಲ್ಗಡಲ ತೆರೆಯ ನೊರೆಯಂತೆ ಬಿಳಿದಾದ ಕೋಮಲವಾದ ಶಾಂತವಾದ ಬೆಳ್ದಿಂಗಳು ದೊಡ್ಡದಾದ ಎರಡು ಕಿಟಕಿಗಳಿಂದ ಕೋಣೆಯೊಳಗೆ ಪ್ರವಾಹದಂತೆ ನುಗ್ಗಿಬಂದು ಲಲಿತಮ್ಮನನ್ನೂ ನಾಗರಾಜನನ್ನೂ ಗೋಡೆ ಮೇಲಿದ್ದ ಸತಿಪತಿಯರ ಚಿತ್ರಗಳನ್ನೂ ತನ್ನ ಜ್ಯೋತ್ಸ್ನೆಯಿಂದ ಮುಳುಗಿಸಿಬಿಟ್ಟಿತ್ತು. ಇಬ್ಬರೂ ಮಾತಾಡದೆ ಬಹುಹೊತ್ತು ಒಬ್ಬರನ್ನೊಬ್ಬರು ನೋಡುತ್ತಾ ಮೌನವಾಗಿದ್ದರು. ಇಬ್ಬರ ಮನಸ್ಸಿನಲ್ಲಿಯೂ ಏನೇನೋ ಆಲೋಚನೆ.

ಲಲಿತಮ್ಮನಿಗೆ ನಾಗರಾಜನಂಥಾ ಪತಿ ಸಿಕ್ಕಿದನಲ್ಲಾ ಎಂಬ ಸಂತೋಷ ಒಂದು ಕಡೆ. ಇನ್ನೊಂದು ಕಡೆ ನಿಜಸ್ಥಿತಿಯನ್ನು ತಿಳಿಸದೆ ಅವರನ್ನು ಮೋಸಪಡಿಸಿದರಲ್ಲಾ, ಆ ಮೋಸದಲ್ಲಿ ತಾನೂ ಭಾಗಿಯಾಗಿರುವೆನಲ್ಲಾ ಎಂಬ ಎದೆಯ ಯಾತನೆ. ನಾಗರಾಜನಿಗೆ ತನ್ನ ಮೋಸಕ್ಕೆ ಎಲ್ಲರೂ ಒಳಗಾದರಲ್ಲಾ ಎಂದು ಒಳಗೊಳಗೇ ನಗು. ಲಲಿತಮ್ಮನಿಗೆ ಇನ್ನೊಂದು ಭೀತಿ. ಏನೆಂದರೆ ತನ್ನ ಅವಲಕ್ಷಣವು ಗೊತ್ತಾದರೆ ಮುಂದೆ ಏನಾಗಿಬಿಡುವುದೋ; ತಾನು ಬಹಳ ದಿವಸಗಳಿಂದಲೂ ನಿರ್ಮಿಸಿದ್ದ ಸವಿಗನಸು ಎಲ್ಲಿ ಇಂದು ಬೆಳ್ದಿಂಗಳಲ್ಲಿ ಒಡೆದು ಪುಡಿಯಾಗುವುದೋ ಎಂದು. ಕಡೆಗೆ ಆಕೆ ಏನಾದರೂ ಆಗಲಿ ನಿಜವನ್ನು ತಿಳಿಸಿಬಿಡಬೇಕೆಂದು ಮೆಲ್ಲಗೆ ಮಾತಾಡಿದಳು.

"ಅಂತೂ ನೀವು ನನ್ನಂಥ ನಿರ್ಭಾಗ್ಯೆಯನ್ನು ಕೈಹಿಡಿದರಲ್ಲಾ" ಎಂದಳು. ಅವಳ ಕಣ್ಣಿನಿಂದ ಒಂದೆರಡು ಬಿಂದುಗಳು ಸೂಸಿದುವು.

ನಾಗರಾಜನು ಅದನ್ನು ನೋಡಿ ಸಹಿಸಲಾರದೆ "ಇದೇನು ಲಲಿತಾ, ಈ ಬೆಳ್ದಿಂಗಳಲ್ಲಿ ಅಳುವುದೇ? ನೀನು ನಿರ್ಭಾಗ್ಯೆಯಲ್ಲ, ನನ್ನ ಭಾಗ್ಯದ ಲಕ್ಷ್ಮಿ!" ಎಂದನು.

ಲಲಿತಮ್ಮನು ನಾಗರಾಜನನ್ನೇ ನೋಡುತ್ತಾ ಮೆಲ್ಲಗೆ ತನ್ನ

ಸೆರಗನ್ನು ಓರೆಮಾಡಿದಳು. ನಾಗರಾಜನು ಆಕೆಯ ವಕ್ರವಾದ ಕೈಯನ್ನು ನೋಡಿದನು. ಚಕಿತನಾಗದೆ ತಾನೂ ತನ್ನ ತಲೆಯುಡುಪನ್ನು ಮೆಲ್ಲಗೆ ತೆಗೆದಿಟ್ಟನು. ಲಲಿತಮ್ಮ ಅವನ ಹರಿದುಹೋದ ಕಿವಿಯನ್ನು ನೋಡಿದಳು. ಇಬ್ಬರ ಮನಸ್ಸೂ ಏಕೋ ಏನೋ ಶಾಂತವಾಯಿತು. ನಾಗರಾಜ ನಕ್ಕನು. ಲಲಿತಮ್ಮನೂ ನಕ್ಕಳು. ಅದನ್ನು ನೋಡಿ ಚಂದ್ರನೂ ನಕ್ಕನು. ತಾರೆಗಳೂ ನಕ್ಕವು. ಬಾನ್ದೇವಿ ಮಂದಹಸಿತೆಯಾದಳು. ಗೋಡೆಯ ಮೇಲೆ ಬೆಳ್ದಿಂಗಳಲ್ಲಿ ವಿರಾಜಿಸುತ್ತಿದ್ದ ದಂಪತಿಗಳ ಚಿತ್ರಪಟಗಳೂ ಗಹಗಹಿಸಿ ನಕ್ಕುಬಿಟ್ಟವು? ಈಶ್ವರ ಎನ್ನುವ ಪುರುಷೋತ್ತಮನು ಇರುವುದು ಹೌದಾದರೆ ಅವನೂ ನಕ್ಕಿರಬೇಕು!



# ಆರಾಣೆ ಮೂರುಕಾಸು

೧

ಗೋಪಾಲಯ್ಯ, ಮಾಧವರಾಯರು, ನಾನು, ಮೂವರೂ ಮನೆಯ ಚಾವಡಿಯಲ್ಲಿ ಕೂತುಕೊಂಡು ಮಾತಾಡುತ್ತಿದ್ದೆವು. ಕ್ಯಾಲಿಫೋರ್ನಿಯದ ವಿದ್ಯಾಭ್ಯಾಸ ಪದ್ಧತಿ, ಅಮೇರಿಕದ ಐಶ್ವರ್ಯ, ಭಾರತೀಯರ ಗೋಳು, ಆಧುನಿಕರ ನಾಗರಿಕತೆ—ಮೊದಲಾದ ವಿಚಾರಗಳು ಒಂದನ್ನೊಂದು ಹಿಂಬಾಲಿಸಿ ಕ್ರಮವಾಗಿ ಅಳಿಸಿಹೋದುವು, ನೀರಿನಮೇಲೆ ಬರೆದ ಚಿತ್ರಗಳಂತೆ.

ಇದ್ದಕ್ಕಿದ್ದ ಹಾಗೆ "ಎಲ್ಲಿ, ಆ ಕತೆ ಹೇಳಿ!" ಎಂದರು ಗೋಪಾಲಯ್ಯ ಮಾಧವರಾಯರನ್ನು ಕುರಿತು.

"ಯಾವ ಕತೆ?" ಎಂದರು ಮಾಧವರಾಯರು.

"ಅದೇ, ಆ 'ಆರಾಣೆ ಮೂರು ಕಾಸಿ' ನ ಕತೆ; ಅಂದು ನೀವು ಹೇಳಿದ್ದಿರಲ್ಲ ನನಗೆ." ನನ್ನ ಕಡೆಗೆ ಕೈತೋರಿಸಿ "ಇವರು ನಿಮ್ಮ ಬಾಯಿಂದಲೇ ಕೇಳಬೇಕಂತಪ್ಪಾ ಅದನ್ನು. ಹೇಳಿ, ಎಷ್ಟೆಂದರೂ ಕತೆ

